# ಒಗಟುಗಳಲ್ಲಿನ ಜ್ಞಾನ




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, ದಶ ಅಷ್ಟಾಧಿಕ (88) ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**





# ಒಗಟುಗಳಲ್ಲಿನ ಜ್ಞಾನ


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**

---






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಮೇ–2017

ಪ್ರತಿಗಳು : 1000 **ಬೆಲೆ. 90/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವ ಗ್ರಂಥದಲ್ಲಿ ವಜ್ರವಾಕ್ಯಗಳು
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ), ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ), ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ) Cell :**9632418716**

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ,ತೋಣಚಿಕೊಪ್ಪಲ್,ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ), ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಒಗಟುಗಳಲ್ಲಿನ ಜ್ಞಾನ



ಕಥೆಗಳು ಬೇರೆ, ಒಗಟುಗಳು ಬೇರೆ. ಕಥೆಗಳು, ಹೇಳುವವರ ಮುಖಾಂತರ ಕೇಳಬಹುದು. ಕಥೆಯಲ್ಲಿ ಪ್ರಶ್ನೆಗಳಿರುವುದಿಲ್ಲ ಒಗಟುಗಳು ಹೇಳುವ ವರಿಗೆ, ಕೇಳುವವರು ಪುನಃ ಉತ್ತರ ಹೇಳಬೇಕಾಗಿರುತ್ತದೆ. ಒಗಟುಗಳಲ್ಲಿ ಪ್ರಶ್ನೆಗಳಿರುತ್ತವೆ. ಪಾಠಶಾಲೆಗಳಲ್ಲಿರುವ ತಿಳುವಳಿಕೆಯಿಲ್ಲದ ಮಕ್ಕಳಿಗಾಗಿ, ಒಗಟುಗಳನ್ನು ಸೃಷ್ಠಿಸಿದ್ದಾರೆ. ಒಗಟುಗಳಲ್ಲಿನ ಪ್ರಶ್ನೆಗೆ ಉತ್ತರವನ್ನು ಕಥೆ ಕೇಳಿದವರು ಹೇಳಬೇಕಾಗಿರುತ್ತದೆ. ಅದರಿಂದ ಕೇಳಿದ ಕಥೆಗೆ ಉತ್ತರ ಏನೆಂದು ಆಲೋಚಿಸುವು ದರಿಂದ ಮಕ್ಕಳಿಗೆ ಬುದ್ಧಿಬಲ ಬೆಳೆಯುತ್ತದೆಂದು ಅಂದಿನ ಉಪಾಧ್ಯಾಯರ ಉದ್ದೇಶ. ಒಗಟುಗಳು ದ್ವಂದ ಅರ್ಥಗಳಿಂದ ಕೂಡಿಕೊಂಡಿರುತ್ತವೆ. ಒಂದು ಪ್ರಪಂಚ ಅರ್ಥ ಒಳಗೊಂಡಿರುವಾಗ ಮತ್ತೊಂದು ಪರಮಾತ್ಮ ಅರ್ಥ ಒಳಗೊಂಡಿರುತ್ತವೆ. ಒಗಟುಗಳಲ್ಲಿನ ಪ್ರಶ್ನೆಗೆ ಪ್ರಪಂಚ ಅರ್ಥದಿಂದ ಉತ್ತರ ಹೇಳಿದರೆ ಅದು ಅಲ್ಲವೆಂದು ಪರಮಾತ್ಮ ಅರ್ಥವನ್ನು ತೋರಿಸಬಹುದು. ಒಂದುವೇಳೆ ಉತ್ತರ ಹೇಳುವವನು ಪರಮಾರ್ಥ ಅರ್ಥವನ್ನು ಹೇಳಿದರೆ, ಅದು ಅಲ್ಲವೆಂದು ಪ್ರಪಂಚ ಅರ್ಥವನ್ನು ತೋರಿಸಬಹುದು. ಈ ವಿಧವಾಗಿ ಒಬ್ಬ ವ್ಯಕ್ತಿಯನ್ನು ಮೀರಿ ಅವನ ಬುದ್ಧಿಗೆ ಹದವನ್ನು ಇಡಬಹುದು. ಉದಾಹರಣೆಗೆ "ಹಣ್ಣಲ್ಲದ ಹಣ್ಣು ಯಾವುದು" ಎಂದು ಒಂದು ಒಗಟನ್ನು ಕೇಳಿದಾಗ ಅದಕ್ಕೆ ಉತ್ತರ ಪ್ರಪಂಚ ಸಂಬಂಧವಾಗಿ ವಿಭೂತಿಹಣ್ಣೆಂದು ಹೇಳಿದರೆ, ಅದು ಅಲ್ಲವೆಂದು ದೈವ ಸಂಬಂಧವಾದ ಉತ್ತರವಾಗಿ ತಲೆಹಣ್ಣು ಎಂದು ಹೇಳಬಹುದು. ಈ ವಿಧವಾಗಿ ಪ್ರತಿಯೊಂದು ಒಗಟಿಗು ಎರಡು ಉತ್ತರಗಳಿರುತ್ತವೆ. ಆದರೇ ಎಲ್ಲರಿಗೂ ಎರಡು ಉತ್ತರಗಳು ತಿಳಿದಿರುವುದಿಲ್ಲ. ಕೆಲವರಿಗೆ ಒಂದು ಉತ್ತರ ಕೂಡಾ ತಿಳಿಯದೆ ಹೋಗಿ ಕೆಲವರಿಗೆ ಪ್ರಪಂಚ ಸಂಬಂಧವಾದ ಉತ್ತರ ಮಾತ್ರ ತಿಳಿದಿರುತ್ತದೆ. ಬಹಳ ಜನರಿಗೆ ದೈವ ಸಂಬಂಧ ಉತ್ತರ ತಿಳಿದಿಲ್ಲ. ಆದ್ದರಿಂದ ಎರಡು ವಿಧಗಳ ಉತ್ತರಗಳು ತಿಳಿದವರು ಬಹಳ ಅಪರೂಪವಾಗಿರುತ್ತಾರೆ. ಈಗಿನ ಕಾಲದಲ್ಲಿ ಒಗಟುಗಳೆಂದರೇ ಏನೆಂದು ಕೂಡಾ ಬಹಳ ಜನರಿಗೆ ತಿಳಿದಿಲ್ಲ. ಅಂತಹವರಿಗೆ ಒಗಟುಗಳಲ್ಲಿರುವ ಪ್ರಾಪಂಚಿಕ ಸಂಬಂಧವಾದ ಒಂದು ಉತ್ತರ ಕೂಡಾ ತಿಳಿದಿಲ್ಲ. ಪ್ರಪಂಚ ಉತ್ತರವೇ ತಿಳಿಯದಿರುವಾಗ ಒಗಟಿನಲ್ಲಿ ಅಡಗಿರುವ ದೈವ ಜ್ಞಾನವನ್ನು ಹೇಗೆ

ಗುರುತಿಸಬಲ್ಲರು? ಒಟ್ಟಿನಲ್ಲಿ ಒಗಟುಗಳು ಕ್ಷೀಣಿಸುವ ಸ್ಥಿತಿಗೆ ಬಂದಿವೆ, ಕೊನೆಯ ಅವಸಾನ ದಶೆಯಲ್ಲಿರುವ ಒಗಟುಗಳನ್ನು ಕುರಿತು ನಾವು ಈಗ ಹೇಳಿಕೊಳ್ಳುವುದರಿಂದ ಅವುಗಳಿಗೆ ಸ್ವಲ್ಪ ಉಸಿರು ಬಂದಂತಾಗಿದೆಯೆಂದು ತಿಳಿಯುತ್ತಿದ್ದೇನೆ. ಒಗಟುಗಳಿಗೆ ಬಲ ಕೈಗೂಡುವುದಕ್ಕೆ ನಾವು ಅವುಗಳನ್ನು ಶೇಕರಿಸಿ ಅವುಗಳಲ್ಲಿ ಅಡಗಿರುವ ಜ್ಞಾನ ಸಂಬಂಧವಾದ ವಿಷಯಗಳನ್ನು ಹೇಳಬೇಕೆಂದುಕೊಂಡಿದ್ದೇವೆ.

**ಶರೀರ ಜ್ಞಾನ ಎಷ್ಟು ಇದ್ದರೂ. ಆತ್ಮ ಜ್ಞಾನವಿಲ್ಲದ ಜೀವನ ವ್ಯರ್ಥ.**

## 1. ಮನೆಗೆ ಕಾವಲು ಕಾಯುತ್ತದೆ. ಆದರೇ ನಾಯಿಯಲ್ಲ?

ಈ ಒಗಟಿಗೆ ಪ್ರಪಂಚ ಸಂಬಂಧವಾಗಿ ಉತ್ತರವನ್ನು ಹೇಳಿಕೊಂಡರೆ. "ಬೀಗ" ಎಂದು ಹೇಳಬಹುದು. ನಾಯಿ ಅಲ್ಲದಿದ್ದರೂ ಮನೆಯೊಳಗೆ ಯಾರು ಪ್ರವೇಶಿಸದಂತೆ, ಕಾವಲಾಗಿ ಎಲ್ಲರಿಗೂ ಕಾಣಿಸುವುದು "ಬೀಗ" ಆದ್ದರಿಂದ, ಅದನ್ನು ಉತ್ತರವಾಗಿ ಹೇಳಬೇಕಾಗಿಬಂದಿದೆ. ಇನ್ನೂ ಪ್ರಪಂಚ ಸಂಬಂಧವಾಗಿ ಅಲ್ಲದೇ ಆಧ್ಯಾತ್ಮಿಕವಾಗಿ ಇದಕ್ಕೆ ಉತ್ತರವನ್ನು ಹೇಳಿದರೆ ಈ ವಿಧವಾಗಿ ಇದೆ. ಮನುಷ್ಯ ನಿವಾಸಿಸುವುದು ಮನೆಯಾದರೆ ಜೀವಿಯು ನಿವಾಸಿಸುವ ಮನೆ ಶರೀರವಾಗುತ್ತದೆ. ಹೊರಗಿನ ಪ್ರಪಂಚದಲ್ಲಿ ಮನುಷ್ಯರು ನಿವಾಸಿಸುವ ಮನೆಯನ್ನು ಕಲ್ಲಿನಿಂದಾಗಲಿ, ಮಣ್ಣಿನಿಂದಾಗಲಿ, ಕಟ್ಟಿಗೆಗಳಿಂದಾಗಲಿ, ಕಟ್ಟಿಕೊಂಡಿರಬಹುದು. ಕಟ್ಟಿಗೆಗಳಿಂದ ಕಟ್ಟಿದ ಚಿಕ್ಕ ಗುಡಿಸಲಾಗಲಿ, ಮಣ್ಣಿನಿಂದ ಕಟ್ಟಿರುವ ಚಿಕ್ಕ ಮನೆಯಾಗಲಿ, ಕಲ್ಲಿನಿಂದ ಕಟ್ಟಿದ ಮಹಡಿಯಾಗಲಿ ಮನುಷ್ಯರಿಂದ ಕಟ್ಟಲ್ಪಟ್ಟಿರುವುದೇ. ಆದರೆ ಜೀವಿಯು ನಿವಾಸಿಸುವ ಶರೀರವನ್ನು ಮನುಷ್ಯರು ತಯಾರು ಮಾಡಲಿಲ್ಲ. ಶರೀರ ಗೃಹವು ಪ್ರಕೃತಿಯಿಂದ ತಯಾರುಮಾಡಲ್ಪಟ್ಟಿದೆ. ಶರೀರವೆನ್ನುವ ಮನೆ, ದೇವರ ಅಧ್ಯಕ್ಷತೆಯಿಂದ, ಪ್ರಕೃತಿ ಕಾರ್ಯದಿಂದ, ರಕ್ತ ಮಾಂಸಗಳಿಂದ ತಯಾರಿ ಮಾಡಲ್ಪಟ್ಟಿದೆ. ಮನುಷ್ಯ ತಾಯಾರು ಮಾಡಿದ ಮನೆಗೆ ಪ್ರವೇಶದ್ವಾರಗಳು ಒಂದಾಗಲಿ, ಅದಕ್ಕಿಂತ ಹೆಚ್ಚಾಗಲಿ ಅವಶ್ಯಕತೆಯನ್ನನುಸರಿಸಿ ಇರುತ್ತದೆ. ಪ್ರಕೃತಿಯಿಂದ ತಯಾರು ಮಾಡಲ್ಪಟ್ಟ ಶರೀರ ಗೃಹಕ್ಕೆ ದ್ವಾರಗಳು ಒಟ್ಟು ಒಂಭತ್ತು ಇವೆ. ಅದರಲ್ಲಿ ಏಳು ಪ್ರವೇಶ ದ್ವಾರಗಳಾಗಿ, ಎರಡು ಬಹಿರ್ಗತ ದ್ವಾರಗಳಾಗಿ ಇವೆ.

ಆಧ್ಯಾತ್ಮಿಕ ಪ್ರಕಾರ ಶರೀರ ಮನೆಯಾಗಿದ್ದು, ಪ್ರಪಂಚ ರೀತಿಯಲ್ಲಿ ಮಾಳಿಗೆಗಳು ಮಹಡಿಗಳು ಮನೆಗಳಾಗಿ ಎಷ್ಟೋ ಇವೆ. ಆದರೇ ನಾವು ಜ್ಞಾನಪಥದ ಪ್ರಕಾರ ಶರೀರ ಗೃಹವನ್ನು ಹೇಳಿಕೊಳ್ಳುತ್ತಿದ್ದೇವೆ. ಹೊರಗಿನ ಮನೆಗೆ ಕಾವಲಾಗಿ. ನಾಯಿಯಾದರೂ ಆಗಬಹುದು ಅಥವಾ ಬೀಗ ಆದರೂ ಆಗಬಹುದು, ಆದರೇ ಒಂಭತ್ತು ರಂಧ್ರಗಳಿರುವ ಶರೀರಕ್ಕೆ ಕಾವಲುಗಾರನಾಗಿ ಯಾರಿದ್ದಾರೆಂದು ಆಲೋಚಿಸಿದರೆ, ಒಂದು ವಿಧವಾಗಿ ಕೆಲವರು ಆಧ್ಯಾತ್ಮಿಕ ತಜ್ಞರು ಆಲೋಚಿಸಿ ಹೀಗೆ ಹೇಳುತ್ತಿದ್ದಾರೆ.

**ತಜ್ಞರು :–** ಶರೀರದಲ್ಲಿ ಎಚ್ಚರವಾಗಿರುವುದು ಮನಸ್ಸೇ ಅಲ್ಲವೆ! ಮನಸ್ಸು ಜಾಗ್ರತೆಯಾಗಿರುವುದು, ಶರೀರಕ್ಕೆಲ್ಲಾ ಎಚ್ಚರವಾಗಿರುವುದು. ಶರೀರದಲ್ಲಿನ ಎಲ್ಲಾ ದ್ವಾರಗಳ ಹತ್ತಿರ ಏನು ನಡೆದರೂ ಮೊದಲು ಮನಸ್ಸಿಗೆ ತಿಳಿಯುತ್ತದೆ. ಮನಸ್ಸಿಗೆ ತಿಳಿದ ನಂತರ ಆ ವಿಷಯವನ್ನು ಮನಸ್ಸು, ಒಳಗಿನ ಬುದ್ಧಿಗೆ ತಿಳಿಸುತ್ತದೆ. ಬುದ್ಧಿ ತನಗೆ ತಿಳಿದಿರುವುದನ್ನು ಪಕ್ಕದಲ್ಲಿಯೇ ಇರುವ ಜೀವಿಗೆ ತಿಳಿಸುತ್ತದೆ. ಶರೀರದಲ್ಲಿ ಎಲ್ಲಿ ಏನು ನಡೆದರೂ, ಆ ವಿಷಯವನ್ನು ಹೊರಗಿನಿಂದ ಬುದ್ಧಿಗೆ ತಿಳಿಸುವುದು ಮನಸ್ಸೆ. ಆದ್ದರಿಂದ ಶರೀರ ಗೃಹಕ್ಕೆ ಕಾವಲಾಗಿ ಎಂದಿಗೂ ಎಚ್ಚರವಾಗಿರುವುದು ಮನಸ್ಸು. ಆದ್ದರಿಂದ ಮನಸ್ಸು ಶರೀರಕ್ಕೆ ಕಾವಲುಗಾರನಾಗಿ ಇದೆಯೆಂದು ಹೇಳಬಹುದು. ಹೊರಗಿನ ಮನೆಗೆ ನಾಯಿ ಕಾವಲಾಗಿ ಕಾಯಬಹುದು ಆದರೆ, ಶರೀರವೆನ್ನುವ ಮನೆಗೆ ಮನಸ್ಸು ಕಾವಲು ಕಾಯುತ್ತದೆಂದು ಹೇಳಬಹುದು.

**ನಾನು :–** ನೀವು ಹೇಳಿರುವುದೆಲ್ಲಾ ವಾಸ್ತವ ವಿಷಯವೇ. ಮನಸ್ಸು ನಿದ್ರೆಯೊಳಗೆ ಹೋಗದಂತೆ ಎಚ್ಚರದಲ್ಲಿ ಇರುವವರೆಗು, ಅದು ಶರೀರವೆಲ್ಲಾ ವ್ಯಾಪಿಸಿ ಇರುವುದರಿಂದ, ಒಂಭತ್ತು ದ್ವಾರಗಳ ಹತ್ತಿರ ಏನು ನಡೆದರೂ, ಮನಸ್ಸಿಗೆ ತಿಳಿಯದಂತೆ ನಡೆಯುತ್ತಿಲ್ಲ. ಆದ್ದರಿಂದ ಎಚ್ಚರದಲ್ಲಿ ಇರುವವರೆಗು ಮನಸ್ಸು ಜಾಗ್ರತೆಯಾಗಿದ್ದು, ಎಲ್ಲಿ ಏನು ನಡೆದರೂ ಆ ವಿಷಯವನ್ನು ಮನಸ್ಸೇ ತಿಳಿಸಬೇಕಾಗಿದೆ. ಆದ್ದರಿಂದ ಮನಸ್ಸನ್ನು ಶರೀರ ಗೃಹಕ್ಕೆ ಕಾವಲು ಕಾಯುವುದಾಗಿ ಹೇಳಬಹುದು. ಜಾಗ್ರತ್ತಾವಸ್ಥೆಯಲ್ಲಿ ಮನಸ್ಸು ಶರೀರವೆಲ್ಲಾ ಕಾವಲು ಕಾಯುತ್ತದೆ.

ಅದೇ ನಿದ್ರಾವಸ್ಥೆಯೊಳಗೆ ಹೋದಾಗ ಮನಸ್ಸೊಂದರ ಸ್ಥಿತಿ ಹೇಗಿರುತ್ತದೊ ತಿಳಿಯುತ್ತದಾ? ಎಚ್ಚರದಲ್ಲಿ ಶರೀರವೆಲ್ಲ ವ್ಯಾಪಿಸಿದ ಮನಸ್ಸು ಪೂರ್ತಿಯಾಗಿ ಮುದುಡಿಕೊಂಡು, ಚಿಕ್ಕ ಉಂಡೆಯಾಗಿ ಬದಲಾಗಿಹೋಗುತ್ತದೆ. ನಾವು ಪೆನ್ನಿನಿಂದ ಬರೆಯುವಾಗ ವಾಕ್ಯದ ಕೊನೆಯಲ್ಲಿ ಒಂದು ಚುಕ್ಕೆಯನ್ನು ಇಡುತ್ತೇವೆ ಅಲ್ಲವೆ! ಪೆನ್ನಿನಿಂದ ಇಟ್ಟಿರುವ ಚುಕ್ಕೆ ಎಷ್ಟುಸೈಜು ಇರುತ್ತದೊ, ಅದರಲ್ಲಿ ಹತ್ತನೇ ಒಂದು ಭಾಗ ಚಿಕ್ಕ ಸೈಜು ಚುಕ್ಕೆ ಎಷ್ಟು ಇರುತ್ತದೊ ಅಷ್ಟುಸೈಜು ಉಂಡೆಯಾಗಿ ಬದಲಾಗಿಹೋಗುತ್ತದೆ. ಕಣ್ಣಿಗೆ ಕಾಣಿಸಿ ಕಾಣಿಸದ ಪರಿಮಾಣವಾಗಿ ಬದಲಾಗಿ ಹೋಗುತ್ತದೆ. ಹಾಗೆ ಬದಲಾಗಿಹೋದ ಮನಸ್ಸು, ಶರೀರ ಮಧ್ಯದಲ್ಲಿರುವ ಬ್ರಹ್ಮನಾಡಿ ಮುಖಾಂತರ ಮೆದುಳನ್ನು ಸೇರಿ, ಅಲ್ಲಿ ಏಳನೆ ನಾಡಿಕೇಂದ್ರದಲ್ಲಿ ಆತ್ಮನಲ್ಲಿ ಅಡಗಿಹೋಗುತ್ತಿದೆ. ಆಗ ಮನಸ್ಸು ಪೂರ್ತಿಯಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದೆ. ಮನಸ್ಸು ಬ್ರಹ್ಮನಾಡಿ ಏಳನೆ ಕೇಂದ್ರದಲ್ಲಿ ಅಡಗುವುದನ್ನೇ ನಿದ್ರೆ ಎನ್ನುತ್ತಿದ್ದೇವೆ. ಆಗ ಶರೀರದಲ್ಲಿ ದ್ವಾರಗಳ ಹತ್ತಿರ ಏನು ನಡೆಯುವುದು ಮನಸ್ಸಿಗು ತಿಳಿಯುವುದಿಲ್ಲ, ಬುದ್ಧಿಗು ತಿಳಿಯುವುದಿಲ್ಲ, ಜೀವಿಗೂ ತಿಳಿಯುವು ದಿಲ್ಲ. ಆಗ ಶರೀರದ ಒಳಗೆ ಎಲ್ಲಿಯೋ ವಿಶ್ರಾಂತಿ ತೆಗೆದುಕೊಳ್ಳುವ ಮನಸ್ಸು ಶರೀರಕ್ಕೆ ಕಾವಲಾಗಿ ಇರಲಿಲ್ಲ ಅಲ್ಲವೆ! ಆದ್ದರಿಂದ ಮನಸ್ಸು ಶರೀರಕ್ಕೆ ಕಾವಲುದಾರನು ಅಲ್ಲವೆಂದು ತಿಳಿಯುತ್ತಿದೆ.

ಎಚ್ಚರದಲ್ಲಿ ಇರುವಷ್ಟು ಸಮಯ ಶರೀರವೊಂದರ ಹೊರಗಿನ ಅಂಚುಗಳಲ್ಲಿ ನಡೆಯುವ ವಿಷಯವನ್ನು ಮನಸ್ಸು ತಿಳಿಸಿದರೂ, ನಂತರ ನಿದ್ರೆಯಲ್ಲಿ ಮನಸ್ಸು ಚಿಕ್ಕ ಉಂಡೆಯಾಗಿ ಬದಲಾಗಿ ಒಳಗಡೆ ಹೋಗಿ ನಿಂತುಹೋಗುತ್ತಿದೆ. ಆಗ ಒಳಗಿರುವ ಬುದ್ಧಿಗೆ ಹೊರಗಿನ ವಿಷಯವನ್ನು ತಿಳಿಸುವವನು ಒಬ್ಬನೇ ಒಬ್ಬ ಇದ್ದಾನೆ. ಅವನೇ ಅಕ್ಷರ ಪುರುಷನಾದ ಆತ್ಮ. ಆತ್ಮ, ಮನುಷ್ಯ ಹುಟ್ಟಿದಾಗಿನಿಂದ ಶರೀರವೆಲ್ಲಾ ವ್ಯಾಪಿಸಿದೆ. ನಿದ್ರೆಯಲ್ಲಿಯೂ, ಎಚ್ಚರದಲ್ಲಿಯೂ ಆತ್ಮ ಒಂದೇ ವಿಧವಾಗಿ ಶರೀರವೆಲ್ಲಾ ವ್ಯಾಪಿಸಿರುವುದರಿಂದ, ಎಲ್ಲಕಾಲವು ಆತ್ಮವೇ ಎಲ್ಲಾ ದ್ವಾರಗಳ ಹತ್ತಿರವಿದ್ದಂತೆ ತಿಳಿಯುತ್ತಿದೆ. ಎಚ್ಚರದಲ್ಲಿ ಮನಸ್ಸು ಕೆಲಸ ಮಾಡುತ್ತಿರುವುದು ನಿಜವೇ. ಮನಸ್ಸು ಕೆಲಸ ಮಾಡುವಾಗ

ಕೂಡಾ ಆತ್ಮ ಅಲ್ಲಿದ್ದು, ಮನಸ್ಸನ್ನು ನೋಡುತ್ತಿದೆ. ಮನಸ್ಸು ಎಚ್ಚರವಾಗಿರುವಾಗ, ಹೊರಗಿನ ಶರೀರಕ್ಕೆ ಕಾವಲು ಕಾಯುತ್ತಾಯಿದ್ದು, ಹೊರಗಿನ ವಿಷಯವನ್ನು ಒಳಗಿನ ಬುದ್ಧಿಗೆ ಕಳುಹಿಸುವಾಗ, ಆತ್ಮ ತಾನು ಆ ಕೆಲಸವನ್ನು ಮಾಡದೆ, ಮನಸ್ಸಿಗೇ ಬಿಟ್ಟು ಹಾಕುತ್ತಿದೆ. ಶರೀರದೊಳಗೆ ಮತ್ತು ಶರೀರದ ಅಂಚಿನವರೆಗು ಶರೀರವೆಲ್ಲವೂ ವ್ಯಾಪಿಸಿದ ಮನಸ್ಸಿಗೆ ಮಾತ್ರ, ತನ್ನೊಂದಿಗೆ ಆತ್ಮ ಕೂಡಾ ಶರೀರವೆಲ್ಲಾ ವ್ಯಾಪಿಸಿದೆಯೆಂದು ತಿಳಿದಿಲ್ಲ. ಎಲ್ಲಕಾಲದಲ್ಲಿ ಆತ್ಮ ಶರೀರವೆಲ್ಲಾ ತುಂಬಿಕೊಂಡಿರುವಾಗ, ಮನಸ್ಸು ಮಾತ್ರ ಎಚ್ಚರದಲ್ಲಿ ಶರೀರವೆಲ್ಲಾ ಇರುತ್ತಾ, ನಿದ್ರೆಯಲ್ಲಿ ಶರೀರದಲ್ಲಿ ಒಂದುಕಡೆ ಅಡಗಿಹೋಗುತ್ತಿದೆ. ಮನಸ್ಸು ಒಳಗೆ ಹೋಗಿ, ನಿದ್ರಿಸುವಾಗ ಮನಸ್ಸು ಮಾಡುವ ಕೆಲಸವನ್ನು ಕೂಡಾ ಆತ್ಮವೇ ಮಾಡುತ್ತದೆ. ಇಲ್ಲಿ ವಿಶೇಷವೇನೆಂದರೇ, ಎಚ್ಚರದಲ್ಲಿ ಮನಸ್ಸು ಪ್ರತಿ ಕ್ಷಣ ಯಾವುದೋ ಒಂದು ವಿಷಯವನ್ನು ಬುದ್ಧಿಗೆ ತಿಳಿಸುತ್ತಿರುತ್ತದೆ. ಹಾಗೆ ಮಾಡುವುದು ಮನಸ್ಸೊಂದರ ಕೆಲಸವಾಗಿದ್ದು, ನಿದ್ರೆಯಲ್ಲಿ ಆತ್ಮ, ಮನಸ್ಸೊಂದರ ಕೆಲಸವನ್ನು ಮಾಡಿದರೂ, ಮನಸ್ಸು ತಿಳಿಸಿದಂತೆ ಪ್ರತಿ ಕ್ಷಣ ಯಾವುದೊ ಒಂದು ವಿಷಯವನ್ನು ತಿಳಿಸದೆ, ಅವಶ್ಯಕತೆ ಬಂದಾಗ ಮಾತ್ರವೇ, ಅಗತ್ಯವಾದ ವಿಷಯವನ್ನೇ ತಿಳಿಸುತ್ತದೆ. ಶರೀರದಲ್ಲಿ ಆತ್ಮ ಮಾಡುವ ಕೆಲಸಗಳು, ಮನಸ್ಸು ಮಾಡುವ ಕೆಲಸಗಳು ಬೇರೆಬೇರೆಯಾಗಿದ್ದರೂ, ಮನಸ್ಸು ವಿಶ್ರಾಂತಿ ತೆಗೆದುಕೊಳ್ಳುವ ಸಮಯದಲ್ಲಿ ಮನಸ್ಸೊಂದರ ಕೆಲಸವನ್ನು ಕೂಡಾ ಅವಶ್ಯಕತೆ ಬಂದಾಗ ಆತ್ಮ ಮಾಡುತ್ತದೆ. ಆತ್ಮ ತನ್ನ ಕೆಲಸವನ್ನು ಸ್ವಲ್ಪವಾದರೂ ವಿಶ್ರಾಂತಿ ತೆಗೆದುಕೊಳ್ಳದಂತೆ ಮಾಡುತ್ತಿರುತ್ತದೆ. ಶರೀರದಲ್ಲಿ 25 ಭಾಗಗಳಿಗೆ ವಿಶ್ರಾಂತಿ ಇದ್ದರೂ, ಆತ್ಮಕ್ಕೆ ಮಾತ್ರ ವಿಶ್ರಾಂತಿ ಇರುವುದಿಲ್ಲ. ಶರೀರದಲ್ಲಿನ 25 ಭಾಗಗಳನ್ನು ನಿಬಾಯಿಸುವುದು ಆತ್ಮವೇ ಆಗಿರುವುದರಿಂದ, ಆತ್ಮ ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ ಅವಕಾಶವಿಲ್ಲ. ಆತ್ಮ ವಿಶ್ರಾಂತಿ ತೆಗೆದುಕೊಂಡರೆ, ಆತ್ಮ ಮಾಡುವ ಕೆಲಸಗಳಾದ ಊಸಿರಾಡುವುದು ನಿಂತುಹೋಗುತ್ತದೆ, ಗುಂಡಿಗೆ ಸ್ಪಂದಿಸುವುದು ನಿಂತುಹೋಗುತ್ತದೆ. ಹಾಗೆ ನಡೆಯದೇ ಇರುವುದಕ್ಕೆ, ಆತ್ಮ ಆರ್ಹನಿಶೆಗಳು ಕೆಲಸ ಮಾಡಬೇಕಾದ್ದೆ. ಹೀಗೆ ಆತ್ಮ ಎಲ್ಲಾ ವೇಳೆಗಳಲ್ಲಿ ತನ್ನ ಕೆಲಸವನ್ನು ಮಾಡುತ್ತಾ, ಮನಸ್ಸು ನಿದ್ರೆಮಾಡುವಾಗ ಮನಸ್ಸೊಂದರ ಕೆಲಸವನ್ನು ಕೂಡಾ ಮಾಡುತ್ತಿದೆ. ಈ ವಿಧವಾಗಿ ಶರೀರದಲ್ಲಿನ

ಪೂರ್ತಿ ಸಮಾಚಾರವೆಲ್ಲವನ್ನು ತಿಳಿದುಕೊಂಡರೆ, ಆತ್ಮ ಒಂದುಮಾತ್ರವೇ ಎಲ್ಲಾವೇಳೆಯಲ್ಲಿ ಶರೀರವನ್ನು ಕಾದುಕೊಂಡಿದೆ. ಆದ್ದರಿಂದ ಶರೀರಕ್ಕೆ ಪೂರ್ತಿ ಕಾವಲುಗಾರನಾಗಿ ಇರುವವನು ಆತ್ಮವೇಯೆಂದು ಹೇಳಬಹುದು. "ಮನೆಗೆ ಕಾವಲು ಕಾಯುತ್ತದೆ, ಆದರೇ ನಾಯಿಯಲ್ಲ" ಎನ್ನುವ ಒಗಟಿಗೆ ಉತ್ತರವನ್ನು ಪ್ರಪಂಚ ರೀತಿಯಲ್ಲಿ ಹೇಳಿದರೆ "ಬೀಗ" ಆಗುತ್ತದೆ. ಆಧ್ಯಾತ್ಮಿಕ ರೀತಿಯಲ್ಲಿ ಹೇಳಿದರೆ, ಹಗಲು ಮಾತ್ರ ಮನಸ್ಸಾಗಿದ್ದು, ಹಗಲು ರಾತ್ರಿ ಎರಡು ಹೊತ್ತು ಆತ್ಮ ಕಾವಲುಗಾರನಾಗಿದ್ದಾನೆಂದು ಹೇಳಬಹುದು. ನೋಡಿದ್ದೀರಾ! ಚಿಕ್ಕ ಮಾತಾಗಿರುವ ಒಂದು ಒಗಟನ್ನು ಬಿಚ್ಚಿ ಹೇಳಿಕೊಂಡರೆ, ಅದರಹಿಂದೆ ನಮಗೆ ತಿಳಿಯದ ಎಷ್ಟು ಆಧ್ಯಾತ್ಮಿಕ ರಹಸ್ಯ ಒಳಗೊಂಡಿದೆಯೋ, ಇಂತಹ ಮತ್ತಷ್ಟು ಒಗಟುಗಳನ್ನು ಬಿಚ್ಚಿ ಹೇಳಿಕೊಳ್ಳುವುದರಿಂದ, ಎಷ್ಟೋ ಜ್ಞಾನ ನಮಗೆ ತಿಳಿಯಬಲ್ಲದೆಂದು ಆಶಿಸುತ್ತಾ, ಈಗ ಮತ್ತೊಂದು ಒಗಟನ್ನು ನೋಡೋಣ.

**ದೈವಜ್ಞಾನದೊಂದಿಗೆ ಸಂಬಂಧ ಇಲ್ಲದಂತೆ ಇದ್ದು, ಮಾಯೆಯೊಂದಿಗೆ ಸಂಬಂಧ ಪಟ್ಟವನು ಶಾಶ್ವತವಾಗಿ ದುಃಖ ಪಡುತ್ತಾನೆ.**

## 2. ಮನೆಯಿದೆ ಆದರೆ ಬಾಗಿಲು ಇಲ್ಲ. ಮನುಷ್ಯ ಇದ್ದಾನೆ ಆದರೆ ಮಾತಿಲ್ಲ?

ಈ ಒಗಟಿನಲ್ಲಿ ಕೂಡಾ ಮನೆ ಎನ್ನುವ ಮಾತು ಇದೆ. ಆದ್ದರಿಂದ ಇದು ಕೂಡಾ ಸುಲಭವಾಗಿ ಅರ್ಥವಾಗುತ್ತದೆ. ಈ ಒಗಟಿನಲ್ಲಿ ಮನೆ, ಮನುಷ್ಯ ಇದ್ದಾರೆಂದು ಹೇಳಿ ಮನೆಗೆ ಬಾಗಿಲು, ಮನುಷ್ಯನಿಗೆ ಮಾತುಯಿಲ್ಲ ಎಂದು ಹೇಳುವುದರಲ್ಲಿ ಪ್ರತ್ಯೇಕತೆ ಇದೆ. ಇದರಲ್ಲಿ ಪ್ರಪಂಚ ಸಂಬಂಧವಾಗಿ ನೋಡಿದರೆ ಮರಣಿಸಿದ ಮನುಷ್ಯನಿಗೆ ಮಾತು ಇರುವುದಿಲ್ಲ. ಹಾಗೆಯೇ ಶವಕ್ಕೆ ಕಟ್ಟಿದ ಗೋರಿಗೆ ಬಾಗಿಲು ಇರುವುದಿಲ್ಲ. ಆದ್ದರಿಂದ ಇದಕ್ಕೆ ಉತ್ತರವಾಗಿ ಯಾರಾದರೂ ಗೋರಿ ಎಂದು ಹೇಳಬಹುದು. ಹೇಳಿದ ಒಗಟಿನಲ್ಲಿ ಇರುವ ಪ್ರಶ್ನೆಗೆ, ಪ್ರಪಂಚ ರೀತಿಯಲ್ಲಿ ಗೋರಿ ಎನ್ನುವ ಉತ್ತರ ಸರಿಹೋದರೂ, ಆಧ್ಯಾತ್ಮಿಕ ವಿದ್ಯೆಯನ್ನು ಅನುಸರಿಸಿ ಏನು ಉತ್ತರ ಇದೆಯೋ ಈಗ ನಾವು ಪರಿಶೀಲಿಸಿ ನೋಡೋಣ.

ಈ ಕಥೆಯಲ್ಲಿ ಬಾಗಿಲು ಇಲ್ಲದ ಮನೆ, ಮಾತನಾಡದ ಮನುಷ್ಯ ಇರುವುದರಿಂದ, ಈ ಮಾತುಗಳು ಆಧ್ಯಾತ್ಮಿಕದಲ್ಲಿ ಎಲ್ಲಿ ಸರಿಹೋಗುತ್ತವೊ ನೋಡಬೇಕಾಗಿದೆ. ಆಧ್ಯಾತ್ಮಿಕ ಎಂದರೇ ಆತ್ಮವನ್ನು ಅಧ್ಯಯನ ಮಾಡುವುದೆಂದು ತಿಳಿಯುತ್ತಿದೆ. ಆತ್ಮ ಒಂದರ ಅಧ್ಯಯನವೆಲ್ಲವೂ ಶರೀರದಲ್ಲಿಯೇ ಇದೆ. ಆದ್ದರಿಂದ ಪ್ರತಿ ಒಗಟಿಗು ಉತ್ತರವನ್ನು, ಶರೀರ ಪರಿಧಿಯಲ್ಲಿ ನೋಡಿದಾಗಲೇ ಆಧ್ಯಾತ್ಮಿಕ ಉತ್ತರ ಅನಿಸಿಕೊಳ್ಳುತ್ತದೆ. ಆದ್ದರಿಂದ ನಾವು ಈ ಒಗಟಿಗೆ ಕೂಡಾ ಉತ್ತರವನ್ನು ಶರೀರದಲ್ಲಿಯೇ ಹುಡುಕಿ ತಿಳಿದುಕೊಳ್ಳೋಣ. ಮಾತನಾಡದ ಮನುಷ್ಯ ಎಂದರೇ ಪ್ರಪಂಚ ರೀತಿಯಲ್ಲಿ ಮರಣಿಸಿದವನೆಂದು (ಶವವೆಂದು) ಹೇಳಿದರೂ ಸರಿಹೋಗುತ್ತದೆ. ಆದರೇ ಆಧ್ಯಾತ್ಮಿಕ ರೀತಿಯಲ್ಲಿ ನೋಡಿದರೆ ಶರೀರದಲ್ಲಿ ನಿವಾಸಿಸುವ ಜೀವಿಯು ಒಂದೇವೊಂದು ಕೆಲಸವನ್ನು ಮಾಡುವವನೆಂದು, ತನ್ನವರೆಗು ಬಂದಿರುವ ಅನುಭೂತಿಗಳನ್ನು ಅನುಭವಿಸುವುದು ಹೊರತು ಜೀವಿಗೆ ಬೇರೆ ಕೆಲಸವಿಲ್ಲವೆಂದು ಮೊದಲೇ ತಿಳಿದುಕೊಂಡಿದ್ದೇವೆ. ತಿಳಿದು ಕೊಂಡಿರುವುದರ ಪ್ರಕಾರ ಜೀವಿಯು ಸ್ವತಃವಾಗಿ ಏನು ಮಾಡಲಾರನು. ಜೀವಿಯು ಪೂರ್ತಿಯಾಗಿ ಅಂಗವಿಕಲನಾಗಿ ಇದ್ದಾನೆ. ಬುದ್ಧಿ ನೀಡಿದ ವಿಷಯವನ್ನು ಚಪ್ಪರಿಸಿ ಅನುಭವವನ್ನು ಪಡೆಯುವುದನ್ನು ಹೊರತುಪಡಿಸಿ ಜೀವಿಯು ನೋಡಲಾರನು, ಕೇಳಲಾರನು, ಮಾತನಾಡಲಾರನು, ಸ್ವತಃವಾಗಿ ಏನು ಮಾಡಲಾರನು. ಹೊರಗೆ ನಡೆದ ಸಂಘಟನೆಯಲ್ಲಿರುವ ಸಮಾಚಾರವನ್ನಾಗಲಿ, ದುಃಖವನ್ನಾಗಲಿ, ಸುಖವನ್ನಾಗಲಿ, ಮನಸ್ಸು ತೆಗೆದುಕೊಂಡು ಬಂದು ಬುದ್ಧಿಗೆ ತಿಳಿಸಿದಾಗ, ಬುದ್ಧಿ, ಗ್ರಹಿಸಿರುವುದೆಲ್ಲವನ್ನು ಜೀವಿಗೆ ತಿಳಿಸಬಲ್ಲದು. ಆಗ ಜೀವಿಯು ಬುದ್ಧಿ ಮೂಲಕ ಬಂದಿರುವುದೇನಾದರೂ ಅನುಭವಕ್ಕೆ ತೆಗೆದುಕೊಂಡು ಅನುಭವಿಸುತ್ತಾನೆ. ಬಂದಿರುವುದು ಸುಖವಾಗಲಿ, ದುಃಖವಾಗಲಿ ಏನಾದರೂ ಅದನ್ನು ಜೀವಿಯು ಅನುಭವಿಸುವುದು ನಡೆಯುತ್ತಿದೆ. ಇದು ಜೀವಿಯೊಂದರ ಕೆಲಸ. ಇಷ್ಟೇ ಹೊರತು ಜೀವಿಗೆ ಬೇರೆ ಕಾರ್ಯ ಏನೂ ಇಲ್ಲ. ಆದ್ದರಿಂದ ಜೀವಿಯನ್ನು ಉದ್ದೇಶಿಸಿ "ಇದ್ದಾನೆ ಆದರೆ ಮಾತಿಲ್ಲ" ಎಂದು ಹೇಳುವುದು ನಡೆದಿದೆ. ಜೀವಿಯು ಇದ್ದರೂ ಮಾತನಾಡುವವನು ಅಲ್ಲ. ಆದ್ದರಿಂದ ಮನುಷ್ಯನಿದ್ದಾನೆ ಆದರೆ ಮಾತಿಲ್ಲ ಎಂದು ಹೇಳಿದ ಮಾತಿಗೆ ಉತ್ತರವಾಗಿ, ಶರೀರದಲ್ಲಿರುವ ಜೀವಿ ಎಂದು ಹೇಳಬಹುದು.

ಮನೆಯಿದೆ ಆದರೆ ಬಾಗಿಲಿಲ್ಲ ಎನ್ನುವ ಮಾತನ್ನು, ಆಧ್ಯಾತ್ಮಿಕ ರೀತಿಯಲ್ಲಿ ನೋಡಿದರೆ ಜೀವಿಯು ನಿವಾಸಿಸುವ ಶರೀರಕ್ಕೆ ಒಂಭತ್ತು ರಂಧ್ರಗಳು ಇವೆಯೆಂದು, ಶರೀರ ಗೃಹಕ್ಕಿರುವ ಒಂಭತ್ತು ರಂಧ್ರಗಳನ್ನು, ಒಂಭತ್ತು ದ್ವಾರಗಳಾಗಿ ಹೇಳಿ ಕೊಂಡಿದ್ದೇವೆ. ಒಂದು ಮನೆಗೆ ಮುಖದ್ವಾರ, ಹಿತ್ತಲು ದ್ವಾರ ಎನ್ನುವವು ಎರಡು ಇರುವಂತೆ, ಶರೀರ ಗೃಹಕ್ಕೆ ಏಳು ಮುಖದ್ವಾರಗಳು ಇವೆ, ಹಾಗೆಯೇ ಎರಡು ಹಿತ್ತಲು ದ್ವಾರಗಳು ಇವೆ. ಆದರೆ ಒಂಭತ್ತು ದ್ವಾರಗಳಿಗೆ ಬಾಗಿಲುಗಳು ಮಾತ್ರ ಇಲ್ಲ. ಆದ್ದರಿಂದ ಬಾಗಿಲು ಇಲ್ಲದ ಮನೆ ಶರೀರವೆಂದು ಕೆಲವರು ಹೇಳುತ್ತಿರುವರು. ಹೊರಗಿನಿಂದ ಬರುವ ವಿಷಯಗಳು, ಏಳು ದ್ವಾರಗಳ ಮೂಲಕ ಶರೀರದೊಳಗೆ ಪ್ರವೇಶಿಸುತ್ತಿರುತ್ತವೆ. ಏಳು ದ್ವಾರಗಳ ಹತ್ತಿರ ಏನು ಪ್ರವೇಶಿಸುತ್ತಿದೆಯೋ, ಅದನ್ನು ಎಚ್ಚರದಲ್ಲಿರುವ ಮನಸ್ಸು ಗ್ರಹಿಸಿ ಒಳಗಿನ ಬುದ್ಧಿಗೆ ಒದಗಿಸುತ್ತಿರುತ್ತದೆ ಹೊರತು, ಪ್ರವೇಶಿಸುವವುಗಳನ್ನು ಬೇಡವೆಂದು ಹೇಳಿ ಪ್ರವೇಶಿಸದಂತೆ ಮಾಡುವುದಕ್ಕೆ, ಆ ದ್ವಾರಗಳಿಗೆ ಬಾಗಿಲುಗಳು ಇಲ್ಲ. ಇಲ್ಲಿ ಯಾರಾದರೂ ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೇ! ಕಣ್ಣಿನ ರಂಧ್ರಗಳು ಎರಡು ಇವೆ ಅಲ್ವಾ! ಅವುಗಳಿಗೆ ಎರಡು ರೆಪ್ಪೆಗಳು ಇವೆ ಅಲ್ಲವೆ! ರೆಪ್ಪೆಗಳು ಕಣ್ಣಿನ ದ್ವಾರಗಳನ್ನು ಮುಚ್ಚಿ ಕಾಣಿಸದಂತೆ ಮಾಡುತ್ತಿವೆ ಅಲ್ಲವೆ! ಹಾಗಿರುವಾಗ ರೆಪ್ಪೆಗಳನ್ನು ಕಣ್ಣಿನ ದ್ವಾರಗಳಿಗಿರುವ ಬಾಗಿಲುಗಳಾಗಿ ಹೇಳಬಹು ದಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ.

ಕಿವಿಗಳ ಎರಡು ರಂಧ್ರಗಳಿಗು, ಮೂಗಿನ ಎರಡು ರಂಧ್ರಗಳಿಗು, ಹಾಗೆಯೇ ಕಣ್ಣಿನ ಎರಡು ರಂಧ್ರಗಳಿಗು, ಬಾಯಿಯ ಒಂದು ರಂಧ್ರಕ್ಕೆ ಕಾಣಿಸುವಂತೆ, ಕಿವಿಗಳಿಗು, ಮೂಗುಗಳಿಗು, ಬಾಯಿಗು ಒಟ್ಟು ಐದು ರಂಧ್ರಗಳಿಗು ಯಾವ ಮುಚ್ಚುಳಗಳು ಇಲ್ಲ. ಕಣ್ಣಿನ ಎರಡು ರಂಧ್ರಗಳಿಗೆ ಮಾತ್ರ ಕಣ್ಣರೆಪ್ಪೆಗಳು ಇವೆ. ಕಣ್ಣಿನ ರೆಪ್ಪೆಗಳು ಕಣ್ಣನ್ನು ಶುಭ್ರ ಮಾಡುವ ವಸ್ತ್ರಗಳಂತಹವು ಆದರೆ ಅವು ಬಾಗಿಲುಗಳಲ್ಲ. ನಿದ್ರೆಹೋಗುವಾಗ ಕಣ್ಣಗುಡ್ಡೆಗಳನ್ನು ಮುಚ್ಚಿಟ್ಟರೂ, ಆಗ ಕಣ್ಣುಗಳಿಂದ ಕೆಲಸವಿಲ್ಲ ಆದ್ದರಿಂದ, ಧೂಳು ಬೀಳದಂತೆ ಕಣ್ಣನ್ನು ಮುಚ್ಚಿಡುವುದಕ್ಕೆ ರೆಪ್ಪೆಗಳನ್ನು ತಯಾರುಮಾಡಿಡುವುದು ನಡೆದಿದೆ. ಮನುಷ್ಯ ಎಚ್ಚರದಲ್ಲಿರುವಾಗಲೂ

ಕೂಡಾ ನಿಮಿಷಕ್ಕೊ, ಅರ್ಧನಿಮಿಷಕ್ಕೊ ಒಂದುಸಲ, ಕಣ್ಣಗುಡ್ಡೆಗಳನ್ನು ಕಣ್ಣರೆಪ್ಪೆಗಳು ಮುಚ್ಚಿ ತೆರೆಯುತ್ತಿರುತ್ತವೆ. ಹಾಗೆ ಮಾಡುವುದರಿಂದ ಕಣ್ಣಿನ ಮೇಲೆ ತೇವವನ್ನು ತಿದ್ದುತ್ತಾ, ಏನಾದರೂ ಧೂಳು ಬಿದ್ದರೂ ಅದನ್ನು ತೆಗೆದುಹಾಕುವಂತೆ ರೆಪ್ಪೆಗಳು ಕೆಲಸ ಮಾಡುತ್ತಿವೆ. ಕಣ್ಣನ್ನು ಶುಭ್ರವಾಗಿ ಇಡುವುದಕ್ಕೆ ಏರ್ಪಡಿಸಿದ ವಸ್ತ್ರದಂತಹ ಪೊರೆಗಳೆ ಕಣ್ಣರೆಪ್ಪೆಗಳು. ಆದರೇ ಕಣ್ಣಿನಲ್ಲಿ ಬೇರೆ ದೃಶ್ಯಗಳನ್ನು ಪ್ರವೇಶಿಸದಂತೆ ಮಾಡುವುದಕ್ಕೆ, ರೆಪ್ಪೆಗಳನ್ನು ತಯಾರುಮಾಡಲಿಲ್ಲ ವೆಂದು ತಿಳಿಯುತ್ತಿದೆ. ಆದ್ದರಿಂದ ಈ ಒಗಟಿನಲ್ಲಿ "ಮನೆಯಿದೆ ಆದರೆ ಬಾಗಿಲು ಇಲ್ಲ" ಎಂದಿದ್ದಾರೆ. ಮನೆ ಎಂದರೇ ಜೀವಿಯು ನಿವಾಸಿಸುವ ಶರೀರವೆಂದು, ಶರೀರಕ್ಕೆ ದ್ವಾರಗಳಿದ್ದರೂ ಬಾಗಿಲು ಇಲ್ಲವೆಂದು ಈ ಮಾತನ್ನು ಹೇಳಿದ್ದಾರೆ. ಅಷ್ಟೇ ಅಲ್ಲದೆ ಶರೀರದಲ್ಲಿನ ಜೀವಿಯು ಮಾತನಾಡುವವನು ಅಲ್ಲವೆಂದು ತಿಳಿಸುವ ಸಲುವಾಗಿ, "ಮನುಷ್ಯ ಇದ್ದಾನೆ ಆದರೆ ಮಾತಿಲ್ಲ" ಎಂದಿದ್ದಾರೆ. ಈ ಕಥೆಗೆ ಉತ್ತರವಾಗಿ ಶರೀರ, ಜೀವಿಯೆಂದು ಹೇಳಬಹುದು.

**ಭೋಗಿ ಆದವನು ಸಂಪದವನ್ನು ಕುರಿತು ಆಲೋಚಿಸುತ್ತಾನೆ.**
**ರೋಗಿ ಆದವನು ಚಿಕಿತ್ಸೆಯನ್ನು ಕುರಿತು ಆಲೋಚಿಸುತ್ತಾನೆ.**
**ಯೋಗಿ ಆದವನು ತನ್ನನ್ನು ಕುರಿತು ಆಲೋಚಿಸುತ್ತಾನೆ.**

## 3. ಒಬ್ಬ ರಾಜನು ಏರುತ್ತಿದ್ದರೆ, ಒಬ್ಬ ರಾಜ ಇಳಿಯುತ್ತಿರುತ್ತಾನೆ ಯಾರು?

ಈ ಒಗಟಿನಲ್ಲಿ ಇಬ್ಬರು ರಾಜರಿದ್ದಾರೆ. ಹತ್ತುವುದು ಇಳಿಯುವುದು ಎರಡು ಕೆಲಸಗಳಿವೆ. ಎಲ್ಲಿಗೆ ಏರುತ್ತಿದ್ದಾರೋ ನಾವು ಆಲೋಚಿಸಬೇಕು. ಇಬ್ಬರು ರಾಜರೇ ಆಗಿರುವುದರಿಂದ, ಒಂದೇ ಸ್ಥಾನ ಹೊಂದಿರುವ ಇಬ್ಬರು ಬೇರೆ ಬೇರೆ ವ್ಯಕ್ತಿಗಳೆಂದು ತಿಳಿಯುತ್ತಿದೆ. ಏರುವುದು, ಇಳಿಯುವುದು ಏನೆಂದು ನೋಡಿದರೆ, ಉದಾಹರಣೆಗೆ ಒಬ್ಬ ವ್ಯಕ್ತಿ ರಾಗಿ ಮುದ್ದೆ ತಿನ್ನುವಾಗ, ಒಂದು ತುತ್ತು ರಾಗಿಮುದ್ದೆಯನ್ನು ತೆಗೆದುಕೊಂಡು ಸಾರಿನಲ್ಲಿ ಅದ್ದಿಕೊಂಡು ಕೆಳಗಿನಿಂದ ಎತ್ತಿ, ಬಾಯಲ್ಲಿ ಇಟ್ಟುಕೊಳ್ಳುತ್ತಿದ್ದಾನೆ. ಹಾಗೆ ಬಾಯಿಯಲ್ಲಿಟ್ಟುಕೊಂಡ ತುತ್ತು

ಬಾಯಲ್ಲಿ ಇದ್ದಂತೆ, ಮತ್ತೊಂದು ರಾಗಿಮುದ್ದೆಯ ತುತ್ತನ್ನು ತೆಗೆದುಕೊಂಡು ತಟ್ಟೆಯಲ್ಲಿನ ಸಾರಿನಲ್ಲಿ ಅದ್ದಿಕೊಂಡು ಎತ್ತಿ ಬಾಯಲ್ಲಿ ಇಟ್ಟುಕೊಳ್ಳುತ್ತಿದ್ದಾನೆ. ಹಾಗೆ ಬಾಯಲ್ಲಿ ಇಟ್ಟುಕೊಳ್ಳದ ಮುನ್ನವೇ, ಬಾಯಲ್ಲಿನ ತುತ್ತನ್ನು ನುಂಗಿಹಾಕಿ ನಂತರ ಅದರ ಸ್ಥಾನದಲ್ಲಿ ಕೆಳಗಿನಿಂದ ತೆಗೆದುಕೊಂಡ ತುತ್ತನ್ನು ಇಟ್ಟು ಕೊಳ್ಳುತ್ತಿದ್ದಾನೆ. ಇದೆಲ್ಲವನ್ನು ಗಮನಿಸಿದರೆ ಒಂದು ತುತ್ತು ಬಾಯೊಳಗೆ ಏರುತ್ತಿದ್ದರೆ, ಒಂದು ತುತ್ತು ಬಾಯೊಳಗಿನಿಂದ ಹೊಟ್ಟೆಯೊಳಗೆ ಇಳಿಯುತ್ತಿದೆ. ಒಂದು ತುತ್ತು ಹೊಟ್ಟೆಯೊಳಗೆ ಇಳಿಯುತ್ತಿದ್ದರೆ, ಒಂದು ತುತ್ತು ಬಾಯೊಳಗೆ ಏರುತ್ತಿದೆ. ಬಾಯಿ ಉನ್ನತಸ್ಥಾನವಾಗಿದ್ದು, ಕೆಳಗೆ ತಟ್ಟೆಯಲ್ಲಿನ ತುತ್ತುಗಳು ಬಾಯೊಳಗೆ ಏರಿ, ಹೊಟ್ಟೆಯೊಳಗೆ ಇಳಿಯುತ್ತಿವೆ. ಒಂದೊಂದು ತುತ್ತು ಮೇಲೆ ಏರುತ್ತಿರುವಾಗ, ಒಂದೊಂದು ತುತ್ತು ಕೆಳಗೆ ಇಳಿಯುತ್ತಿರುವುದು ಎಲ್ಲರಿಗೂ ಪ್ರತ್ಯಕ್ಷವಾಗಿ ತಿಳಿದ ವಿಷಯವೇ. ಇದೆಲ್ಲವೂ ಹೊರಗೆ ಕಾಣಿಸುವ ಪ್ರಪಂಚ ಕಾರ್ಯ. ಇದನ್ನು ಪ್ರಪಂಚ ರೀತಿಯಲ್ಲಿ ಇಳಿಯುವುದು, ಏರುವುದು ತಿನ್ನುವ ತುತ್ತೆಂದು ಹೇಳಬಹುದು.

ಇನ್ನು ಆಧ್ಯಾತ್ಮಿಕ ರೀತಿಯಲ್ಲಿ ಆಲೋಚಿಸಿದರೆ, ನಿತ್ಯವು ಆಹಾರವು ಹೊಟ್ಟೆಯೊಳಗೆ ಏರುವುದು, ಇಳಿಯುವುದು ಇರುವಂತೆ, ಪ್ರತಿದಿನ ಪ್ರತಿಮನುಷ್ಯನಿಗು ಕರ್ಮ ಅವನ ತಲೆಗೆ ಏರುವುದು, ಇಳಿಯುವುದು ನಡೆಯುತ್ತಿದೆ. ಮನುಷ್ಯ ನಿತ್ಯವೂ ಪ್ರಾರಬ್ಧ ಕರ್ಮವನ್ನು ಅನುಭವಿಸುತ್ತಾ, ಅದನ್ನು ತಲೆಯಿಂದ ಇಳಿಸಿಕೊಳ್ಳುತ್ತಿದ್ದಾನೆ. ನಂತರ ಕೂಡಲೇ ನಡೆದ ಕೆಲಸವನ್ನು ನಾನೇ ಮಾಡಿದ್ದೇನೆಂದು ಅಂದುಕೊಳ್ಳುವುದರಿಂದ, ಆಗಾಮಿಕರ್ಮ ಎನ್ನುವ ಹೊಸಕರ್ಮವನ್ನು ಪುನಃ ತಲೆಗೆ ಎತ್ತಿಕೊಳ್ಳುವುದು ನಡೆಯುತ್ತಿದೆ. ಒಂದುಕಡೆ ಕರ್ಮವನ್ನು ಅನುಭವಿಸುತ್ತಾ, ತನ್ನ ತಲೆಮೇಲೆ ಇರುವ ಕರ್ಮವನ್ನು ಮನುಷ್ಯ ಇಳಿಸಿಕೊಳ್ಳುತ್ತಿದ್ದಾನೆ. ಹಾಗೆ ಇಳಿಸಿಕೊಂಡ ಮನುಷ್ಯನೇ, ಅಹಮ್‌ನ್ನು ಹೊಂದಿ ಕೆಲಸವನ್ನು ಮಾಡುವುದರಿಂದ ಕೂಡಲೇ ಹೊಸ ಕರ್ಮವನ್ನು ಸಂಪಾದಿಸಿ ಕೊಳ್ಳುತ್ತಿದ್ದಾನೆ. ಆಹಾರ ಒಂದು ತುತ್ತು ಇಳಿಯುತ್ತಿದ್ದರೆ, ಒಂದು ತುತ್ತು ಬಾಯೊಳಗೆ ಏರುತ್ತಿರುವಂತೆ, ಕರ್ಮ ತಲೆಮೇಲಿನದ್ದು ಒಂದುಕಡೆ

ಇಳಿಯುತ್ತಿದ್ದರೆ, ಒಂದುಕಡೆ ಏರುತ್ತಿದೆಯೆಂದು ಹೇಳಬಹುದು. ಈ ಒಗಟಿಗೆ ಉತ್ತರವಾಗಿ ಆಧ್ಯಾತ್ಮಿಕ ರೀತಿಯಲ್ಲಿ ಕರ್ಮ ಎಂದು ಹೇಳಬಹುದು.

**ಶರೀರಕ್ಕೆ ವ್ಯಾಯಾಮವು ಎಂಥಾದ್ದೊ, ಜೀವಿಗೆ ಜ್ಞಾನ ಅಂಥಾದ್ದು.**

## 4. ಉದ್ಯೋಗ ಸದ್ಯೋಗ ಇಲ್ಲ. ಊರೆಲ್ಲವೂ ವ್ಯಾಪಕವೇ, ಯಾವುದು?

ಈ ಒಗಟಿನ ವಿಷಯದಲ್ಲಿ ಪ್ರಪಂಚ ರೀತಿಯಲ್ಲಿ, ಕೆಲವರು ಒಂದು ಸಮಾಧಾನವನ್ನು ಹೇಳಿದರೆ, ಮತ್ತೆ ಕೆಲವರು ಮತ್ತೊಂದು ಉತ್ತರವನ್ನು ಹೇಳುತ್ತಿದ್ದಾರೆ. ಕೆಲವರೇನೊ ವೇಶ್ಯ ಎನ್ನುತ್ತಾರೆ. ಕೆಲವರೇನೊ ಹಾಸಿಗೆ ಎನ್ನುತ್ತಾರೆ. ಯಾರ ಲೆಕ್ಕ ಅವರದ್ದು, ನನ್ನ ಲೆಕ್ಕ ಆಧ್ಯಾತ್ಮಿಕದ ಪ್ರಕಾರ, ಏನು ಉತ್ತರ ಎಂದು ನೋಡುವುದೇ ನನ್ನ ಕೆಲಸ. ಆದ್ದರಿಂದ ನನ್ನ ಅರ್ಥದ ಪ್ರಕಾರ ಉದ್ಯೋಗ ಸದ್ಯೋಗ ಎನ್ನುವುದರಲ್ಲಿ ಮುಖ್ಯವಾಗಿ, ಯೋಗ ಎನ್ನುವ ಮಾತು ಕಾಣಿಸುತ್ತಿದೆ. 'ಉದ್ಯೋಗ' ಎಂದರೇ ದೊಡ್ಡ ಯೋಗ ಎಂದುಕೊಳ್ಳೋಣ. ದೊಡ್ಡ ಯೋಗ ಯಾವುದನ್ನು ಕುರಿತು ಮಾಡುತ್ತೇವೆ? ಅಸಲಿಗೆ ಯೋಗ ಎನ್ನುವುದು ಯಾವುದಕ್ಕೆ ಕೆಲಸಕ್ಕೆ ಬರುತ್ತದೆ? ಎಂದು ನೋಡಿದರೆ, ಯೋಗ ಎನ್ನುವುದು ದೇವರಲ್ಲಿ ಐಕ್ಯವಾಗುವುದಕ್ಕೆ ಕೆಲಸಕ್ಕೆ ಬರುವುದು. ದೊಡ್ಡ ಯೋಗ ವೆನ್ನುವುದು ಕೂಡಾ ಅದೇ ಫಲಿತವನ್ನು ಕೊಡುವುದು ಎಂದು ತಿಳಿಯುತ್ತಿದೆ. 'ಸದ್ಯೋಗ' ಎನ್ನುವುದು ಏನೆಂದು ಕೆಲವರು ತಿಳಿಯದೆ ಕೇಳಬಹುದು. ಉದ್ಯೋಗ ಎಂದರೇ ದೊಡ್ಡ ಯೋಗ ಎಂಬ ಅರ್ಥವನ್ನು ಕೊಟ್ಟಾಗ, ಸದ್ಯೋಗ ಎಂದರೇ ಒಳ್ಳೆಯ ಯೋಗ ಎಂದು ಅರ್ಥವನ್ನು ಕೊಡುತ್ತಿದೆ. ಒಂದೇ ವಿಷಯವನ್ನೇ ದೊಡ್ಡದಾಗಿ ಹೇಳಬೇಕಾಗಿ ಬಂದಾಗ ಶ್ರೇಷ್ಠವೆಂದು ಒಂದು ಪದದಲ್ಲಿ, ಒಳ್ಳೆಯದೆಂದು ಒಂದು ಪದದಲ್ಲಿ ಹೇಳಿದ್ದಾರೆಂದು, ವಾಸ್ತವವಕ್ಕೆ ಎರಡೂ ಒಂದೇ ಅರ್ಥವನ್ನು ಕೊಡುವ ಮಾತುಗಳೆಂದು ಹೇಳಬಹುದು.

ದೇವರಲ್ಲಿ ಐಕ್ಯವಾಗಿಹೋಗುವುದಕ್ಕೆ, ಜನ್ಮರಾಹಿತ್ಯ ಮಾಡಿಕೊಂಡು ಪುನಃ ಹುಟ್ಟದಂತಿರುವುದಕ್ಕೆ, ಯಾರಾದರೂ ಯೋಗಮಾಡಿ ಜ್ಞಾನಾಗ್ನಿಯಿಂದ ತಮ್ಮ ಕರ್ಮವನ್ನು ಸುಟ್ಟುಹಾಕಿಕೊಂಡು, ಕರ್ಮಶೇಷ ಇಲ್ಲದಂತೆ ಹೋದನಂತರ

ದೇವರಲ್ಲಿ ಐಕ್ಯವಾಗಿಹೋಗುತ್ತಾರೆ. ಏನು ಮಾಡಿದರೂ ಕೊನೆಗೆ ಯೋಗ ಮಾಡದೇ ಯಾರು ಮೋಕ್ಷ ಹೊಂದುವುದಕ್ಕೆ ಸಾಧ್ಯವಿಲ್ಲ. ಮೋಕ್ಷ ಹೊಂದಿದವನು ನಂತರ ಏನಾಗುತ್ತಾನೆ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಅದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಬ್ಬ ಭಕ್ತನು ಗುಡಿ ಹತ್ತಿರಕ್ಕೆ ಹೋಗಿ ತನ್ನ ಉದ್ದೇಶವನ್ನು ಪೂಜಾ ಕಾರ್ಯಕ್ರಮದಲ್ಲಿ  ತಿಳಿಸುತ್ತಿದ್ದನು. ಕೊನೆಗೆ ತಾನು ದೇವರಲ್ಲಿ ಐಕ್ಯವಾಗಿ ದೇವರಾಗಿ ಮಾರ್ಪಡಬೇಕೆಂದು ತಿಳಿಸುವ ಉದ್ದೇಶವನ್ನು, ಪೂಜೆಯ ಕೊನೆಯಲ್ಲಿ ಕರ್ಪೂರವನ್ನು ಬೆಳಗಿಸಿ, ಗುಡಿಯಲ್ಲಿನ ದೇವರಿಗೆ ತೋರಿಸಿದ್ದಾನೆ. ಅಷ್ಟೇ ಅಲ್ಲದೆ ಇದರ ಪ್ರಕಾರವೇ ನಾನು ಕೂಡಾ ಬದಲಾಗಿಹೋಗುತ್ತೇನೆಂದು, ಬೆಳಗುವ ಕರ್ಪೂರದ ಮೇಲೆ ಕೈ ಇರಿಸಿ ಪ್ರಮಾಣ ಮಾಡಿದ್ದಾನೆ. ಕರ್ಪೂರದ ಪ್ರಕಾರ ಬದಲಾಗಿಹೋಗುವುದೇನೆಂದು ಯಾರಿಗಾದರೂ ಪ್ರಶ್ನೆ ಬರದಂತೆ,  ಆ ವಿಷಯವನ್ನು ಮೊದಲೇ ಹೇಳುತ್ತಿದ್ದೇನೆ ಕೇಳಿರಿ. ಕರ್ಪೂರವನ್ನು ಬೆಳಗಿಸದ ಮುನ್ನ ಕರ್ಪೂರಕ್ಕೆ ಒಂದು ಆಕಾರ, ಬಣ್ಣ, ವಾಸನೆ ಇದ್ದವು. ಕರ್ಪೂರವನ್ನು ಬೆಳಗಿಸಿದ ನಂತರ ಅದು ಒಂದು ಎರಡು ನಿಮಿಷಗಳಲ್ಲಿ ಸುಟ್ಟುಹೋಗಿ ಏನು ಕಾಣಿಸದಂತೆ ಹೋಗುತ್ತಿದೆ.  ಎರಡು ನಿಮಿಷಗಳ ಹಿಂದಿದ್ದ ಕರ್ಪೂರವೊಂದರ ಬಣ್ಣ, ಆಕಾರ, ವಾಸನೆ, ಸುಟ್ಟುಹೋದ ನಂತರ ಏನೂ ಇಲ್ಲದಂತೆ ಹೋಗಿವೆ. ಮೊದಲಿದ್ದ ಕರ್ಪೂರ, ಸುಟ್ಟುಹೋದ ನಂತರ ಎಲ್ಲಿಗೆ ಹೋಗಿದೆಯೆಂದು ನೋಡಿದರೆ, ಕರ್ಪೂರಕ್ಕೆ ಅಗ್ನಿ ಬೆರೆತಿರುವುದರಿಂದ, ಅದು ಸುಟ್ಟುಹೋಗಿ ಶೂನ್ಯದೊಳಗೆ ಬೆರೆತುಹೋಗಿದೆ. ಮೊದಲು ಹೊಗೆ ರೂಪವಾಗಿಯೋ, ವಾಯು ರೂಪವಾಗಿಯೋ ಬದಲಾಗಿ ಹೋದ ಕರ್ಪೂರ, ಗುಡಿ ಎಲ್ಲವೂ ವ್ಯಾಪಿಸಿ, ನಂತರ ಗುಡಿ ಹೊರಗು ಕೂಡಾ ವ್ಯಾಪಿಸಿ, ಕೊನೆಗೆ ಹೊರಗಿರುವ ಶೂನ್ಯದೊಳಗೆ ಅಣುವಣುವಿನಲ್ಲೂ ವ್ಯಾಪಿಸಿಹೋಗಿದೆ.

ಯೋಗ ಮಾಡುವವನು ಕೂಡಾ, ಕರ್ಪೂರ ಬದಲಾಗಿಹೋದಂತೆ ಕೊನೆಗೆ ಬದಲಾಗಿಹೋಗಿ, ಅಣುಅಣುವಿನಲ್ಲಿ ವ್ಯಾಪಿಸಿದ ದೇವರಲ್ಲಿ ಐಕ್ಯವಾಗಿ ಹೋಗುತ್ತಾನೆ. ಆದರೇ ಈ ಒಗಟಿನಲ್ಲಿ  "ಉದ್ಯೋಗ ಸದ್ಯೋಗ ಇಲ್ಲದವನು ಊರೆಲ್ಲಾ ವ್ಯಾಪಕವೇ" ಎಂದು ಕರೆದಿದ್ದಾರೆ ಅಲ್ಲವೆ! ಅಸಲು ಯೋಗ

ಮಾಡದವನು, ಊರೆಲ್ಲವೂ ವ್ಯಾಪಿಸಿದ್ದಾನೆಂದು ಹೇಳಿದ್ದಾರೆ. ಇಲ್ಲಿ ನಾವು ಪೂರ್ವದಕಡೆಯಿಂದ ಬಂದಿದ್ದೇವೆ. ಆದರೇ ಈ ಕಥೆ ಪಶ್ಚಿಮದಿಂದ ಹೇಳಲ್ಪಟ್ಟಿದೆಯೆಂದು ತಿಳಿಯುತ್ತಿದೆ. ನಾವು ಒಬ್ಬ ಮನುಷ್ಯ ಮೋಕ್ಷ ಪಡೆದರೆ ದೇವರಾಗಿ ಬದಲಾಗಿ ಊರೆಲ್ಲಾ, ದೇಶವೆಲ್ಲಾ ವ್ಯಾಪಿಸಿಹೋಗುತ್ತದೆಂದು ಹೇಳಿಕೊಂಡಿದ್ದೇವೆ. ಆದರೆ ಮೊದಲೇ ದೇವರಾಗಿರುವವನು ದೇಶವೆಲ್ಲಾ ವ್ಯಾಪಿಸಿರುತ್ತಾನೆ. ಮೊದಲೇ ದೇವರಾಗಿ ಇರುವವನು ಯೋಗ ಮಾಡಬೇಕಾದ ಕೆಲಸವಿಲ್ಲ ಅಲ್ಲವೆ! ಆದ್ದರಿಂದ ಈ ಕಥೆಯಲ್ಲಿ ಉದ್ಯೋಗ, ಸದ್ಯೋಗ ಮಾಡದವನು ಎಂದು ದೇವರನ್ನು ಉದ್ದೇಶಿಸಿ ಹೇಳಿದ್ದಾರೆ. ದೇವರು ಮೊದಲೇ ಎಲ್ಲಾಕಡೆ ವ್ಯಾಪಿಸಿದ್ದಾನೆ ಆದಕಾರಣ, ಆತನನ್ನು ಊರೆಲ್ಲವೂ ವ್ಯಾಪಿಸಿದ್ದಾನೆಂದು ಹೇಳಿದ್ದಾರೆ. ಯೋಗ ಮಾಡದವನು ದೇವರಾಗಿ ಇರುವುದರಿಂದ ಈ ಕಥೆಯಲ್ಲಿ "ಉದ್ಯೋಗ ಸದ್ಯೋಗ ಇಲ್ಲದವನು ಊರೆಲ್ಲಾ ವ್ಯಾಪಕವೇ" ಎಂದು ದೇವರನ್ನು ಕುರಿತು ಹೇಳಿದ್ದಾರೆಂದು ತಿಳಿಯಬೇಕು.

**ಜ್ಞಾನ ತಿಳಿಯುವುದೇ ಕಷ್ಟ, ಆಚರಿಸುವುದು ಸುಲಭ.**

## 5. ಅಲ್ಲಿ ಮಾತನಾಡಿದರೇ ಇಲ್ಲಿ ಕೇಳಿಸುತ್ತೇನೆ, ಇಲ್ಲಿ ಮಾತನಾಡಿದರೆ ಅಲ್ಲಿ ಕೇಳಿಸುತ್ತೇನೆ. ಏನು?

ಇಂದಿನ ಕಾಲದಲ್ಲಿ ಎಲ್ಲರ ಕೈಯಲ್ಲಿ ಸೆಲ್‌ಪೋನ್‌ಗಳು ಇವೆ. ಅವುಗಳಲ್ಲಿ ಅಲ್ಲಿ ಮಾತನಾಡಿದರೆ ಇಲ್ಲಿ ಕೇಳಿಸುವುದು, ಇಲ್ಲಿ ಮಾತನಾಡಿದರೆ ಎಲ್ಲೋ ಕೇಳಿಸುವುದು ನಡೆಯುತ್ತಿದೆ. ಆದ್ದರಿಂದ ಈ ಒಗಟಿನ ಪ್ರಶ್ನೆಗೆ, ಪ್ರಪಂಚ ಸಂಬಂಧವಾದ ಉತ್ತರ ಟೆಲಿಫೋನ್ ಇಲ್ಲವೆ ಸೆಲ್‌ಫೋನ್ ಎಂದು ಹೇಳಬಹುದು. ಈಗ ನಮಗೆ ಬೇಕಾಗಿರುವುದು ಆಧ್ಯಾತ್ಮಿಕ ಸಂಬಂಧವಾದ ಉತ್ತರ. ಆದ್ದರಿಂದ ನಾವು ಶರೀರದಲ್ಲಿಯೇ ಉತ್ತರಕ್ಕಾಗಿ ಹುಡುಕಬೇಕಾಗಿರುತ್ತದೆ. ಪೂರ್ವದಲ್ಲಿ ರಾಜರು, ರಾಜ್ಯಪಾಲನೆ ಇರುತ್ತಿತ್ತು. ಒಂದು ರಾಜ್ಯದ ರಾಜ ಹೇಳಿದ ವಿಷಯ ಇನ್ನೊಬ್ಬ ರಾಜನಿಗೆ ಸೇರಿಸುವುದಕ್ಕೆ ವಾರ್ತಾಹರರು ಎನ್ನುವವರು ಇರುತ್ತಿದ್ದರು. ಅವರು, ವಾರ್ತೆಯನ್ನು ಈ ರಾಜ ಹೇಗೆ ಹೇಳಿದ್ದರೆ,

ಅದೇ ವಿಧವಾಗಿ, ಅದೇ ಹಾವಭಾವಗಳಿಂದ ಆ ರಾಜನಿಗೆ ಹೇಳುತ್ತಿದ್ದರು. ಒಂದು ವಾರ್ತೆ ಎಷ್ಟು ಅಕ್ರೋಶದಿಂದ ಇರುತ್ತದೋ, ಅಷ್ಟೇ ಆಕ್ರೋಶದಿಂದ ವಾರ್ತಾಹರನು ಹೇಳಬೇಕಾಗಿರುತ್ತದೆ. ಹಾಗೆ ಹೇಳುವುದರಿಂದ ಆ ವಾರ್ತೆಯನ್ನು ಕಳಿಸಿದವರು ಎಷ್ಟು ಆವೇಶದಿಂದ ಮಾತನಾಡಿರುತ್ತಾರೋ, ವಾರ್ತೆಯನ್ನು ಕೇಳಿದವನಿಗೆ ತಿಳಿದುಹೋಗುತ್ತದೆ. ವಾರ್ತೆಯನ್ನು ಹೇಳಿದವನು, ಕೇಳಿದವರಿಗೆ ಕೋಪ ಬರುವಹಾಗೆ ವಾರ್ತೆಯನ್ನು ಹೇಳಿದರೂ, ಆ ವಾರ್ತೆಯನ್ನು ಕಳಿಸಿದವರು ಹಾಗೆ ಕಳಿಸಿದ್ದಾರೆಂದು, ವಾರ್ತೆಯನ್ನು ತಂದವನು ಕೇವಲ ಮಧ್ಯವರ್ತಿ ಮಾತ್ರವೇಯೆಂದು ತಿಳಿದು, ವಾರ್ತೆಯನ್ನು ತಂದವನನ್ನು ಏನು ಅನ್ನುತ್ತಿರಲಿಲ್ಲ. ಪೂರ್ವದಲ್ಲಿ ಸಮಾಚಾರವನ್ನು ಸೇರಿಸುವುದಕ್ಕೆ ವಾರ್ತಾಹರನೆ ಆಧಾರ. ಪ್ರತಿ ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ವಾರ್ತಾಹರರು ಇರುತ್ತಿದ್ದರು.

ನಮ್ಮ ಶರೀರವನ್ನು ಕೂಡಾ ಎರಡು ರಾಜ್ಯಗಳಾಗಿ ವಿಭಜಿಸಬಹುದು. ಶರೀರಕ್ಕೆ ಹೊರಗಿರುವ ಐದು ಜ್ಞಾನೇಂದ್ರಿಯಗಳನ್ನು ಹೊರಗಿನ ರಾಜ್ಯವಾಗಿ, ಒಳಗಿರುವ ಬುದ್ಧಿ, ಜೀವಿಯು, ಅಹಂ, ಚಿತ್ತವು ಎನ್ನುವ ನಾಲ್ಕು ಒಳಗಿನ ರಾಜ್ಯವಾಗಿವೆ. ಹೊರಗಿನ ರಾಜ್ಯಕ್ಕು, ಒಳಗಿನ ರಾಜ್ಯಕ್ಕು ಮಧ್ಯದಲ್ಲಿನ ಸಮಾಚಾರವನ್ನು ಸೇರಿಸುವ ವಾರ್ತಾಹರನಂತೆ, ಮನಸ್ಸು ಕೆಲಸ ಮಾಡುತ್ತಿದೆ. ಶರೀರಕ್ಕೆ ಹೊರಗೆ ಅಂಟಿಕೊಂಡಿರುವ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎನ್ನುವ ಐದು ಜ್ಞಾನೇಂದ್ರಿಯಗಳು ತಿಳಿಸುವ ವಿಷಯಗಳನ್ನು, ಮನಸ್ಸು ತೆಗೆದುಕೊಂಡು ಶರೀರದೊಳಗಿರುವ ಬುದ್ಧಿಗೆ ತಿಳಿಸುತ್ತದೆ. ಪೂರ್ವದಲ್ಲಿ ರಾಜರ ಕಾಲದಲ್ಲಿ, ಇರುವುದಿದ್ದಂತೆ ವಾರ್ತಾಹರರು ತಿಳಿಸಿದಹಾಗೆ ಮನಸ್ಸು ಕೂಡಾ, ಹೊರಗಿನ ಜ್ಞಾನೇಂದ್ರಿಯಗಳು ತಿಳಿಸಿರುವ ವಿಷಯವನ್ನು ಹೇಗಿರುವುದನ್ನು ಹಾಗೆ ಬುದ್ಧಿಗೆ ತಿಳಿಸುತ್ತದೆ. ಮನಸ್ಸು ಹೊರಗಿನ ಇಂದ್ರಿಯಗಳಿಗು, ಒಳಗಿನ ಬುದ್ಧಿಗು ಮಧ್ಯದಲ್ಲಿ ವಾರ್ತಾಹರನಂತೆ ಕೆಲಸವನ್ನು ಮಾಡುವುದಲ್ಲದೆ, ಹೊರಗಿನ ವಿಷಯವನ್ನು ಒಳಗೆ ತಿಳಿಸುವುದಕ್ಕೆ, ಒಂದು ಸೆಕೆಂಡುಕಾಲ ಸಹ ಪೂರ್ತಿ ವಿನಿಯೋಗಿಸಿಕೊಳ್ಳುವುದಿಲ್ಲ. ಅರ್ಧಸೆಕೆಂಡು ಕಾಲದಲ್ಲಿ ವಾರ್ತೆಯನ್ನು ಸೇರಿಸುವ ಸಾಮರ್ಥ್ಯವನ್ನು ಮನಸ್ಸು ಹೊಂದಿದೆ. ವಾಸ್ತವಕ್ಕೆ ಅರ್ಧಸೆಕೆಂಡು ಕಾಲ ಕೂಡ

ಹಿಡಿಸುವುದಿಲ್ಲವೆಂದು ಹೇಳಬಹುದು. ಮನಸ್ಸಿನ ಮುಖಾಂತರ ಬಂದಿರುವ ಸಮಾಚಾರವನ್ನು ಬುದ್ಧಿ ಶೇಕರಿಸಿ, ಆ ವಿಷಯವನ್ನು ಪಕ್ಕದಲ್ಲಿಯೇ ಇರುವ ಜೀವಿಗೆ ತಿಳಿಸುತ್ತದೆ. ಒಂದುಕಡೆ ಇರುವ ಜೀವಿಗೆ ತಿಳಿಸುವಾಗಲೇ, ಮತ್ತೊಂದು ಕಡೆ ಇರುವ ಚಿತ್ತಕ್ಕು, ಅಹಂಗು ಕೂಡಾ ಆ ವಿಷಯ ತಿಳಿದುಹೋಗುತ್ತದೆ. ಬುದ್ಧಿ, ಚಿತ್ತ, ಅಹಮ್ ಎಲ್ಲರೂ ಜೀವಿಯನ್ನು ಅಂಟಿಕೊಂಡಿರುವುದರಿಂದ, ಹೊರಗಿನ ಸಮಾಚಾರ ಎಲ್ಲರಿಗೂ ಒಂದೇಬಾರಿ ತಿಳಿದುಹೋಗುತ್ತಿದೆ. ಜೀವಿಯು ಗುಣಭಾಗದಲ್ಲಿ ಗುಣಗಳ ಮಧ್ಯದಲ್ಲಿ ಸಿಲುಕಿಕೊಂಡಿರುವುದರಿಂದ ಆ ಸಮಾಚಾರಕ್ಕೆ, ಆ ಸಮಯದಲ್ಲಿರುವ ಕರ್ಮವನ್ನು ಅನುಸರಿಸಿ, ಗುಣ ಭಾಗದಲ್ಲಿರುವ ಹನ್ನೆರಡು ಗುಣಗಳಲ್ಲಿ ಯಾವುದೋ ಒಂದು ಗುಣ ಬುದ್ಧಿಗೆ ವಿವರಣೆ ಕೊಡುತ್ತದೆ. ಬುದ್ಧಿ ಹೇಳಿದ ಸಮಾಚಾರವನ್ನು ಅನುಸರಿಸಿ ಜೀವಿಯು ಸಂತೋಷಪಡುವುದೋ ಇಲ್ಲವೆ ದುಃಖಪಡುವುದೋ ನಡೆಯುತ್ತಿರುತ್ತದೆ. ಆಗ ಆ ಸಮಯಕ್ಕೆ ಕರ್ಮವನ್ನು ಅನುಸರಿಸಿ, ಜೀವಿಗೆ ತಗಲಿಕೊಂಡ ಗುಣವೊಂದರ ವಿವರವನ್ನು ಬುದ್ಧಿ ಆಲೋಚಿಸುತ್ತಿರುವಾಗ, ಮೇಲೆ ಕರ್ಮಚಕ್ರದಲ್ಲಿ ಅನುಭವಿಸಬೇಕಾದ ಕರ್ಮವನ್ನು ಅನುಸರಿಸಿ, ಚಿತ್ತವು ನಿರ್ಣಯಿಸುತ್ತದೆ. ಬುದ್ಧಿ ಯೋಚಿಸುವ ಗುಣವನ್ನು ಚಿತ್ತವು ಕರ್ಮ ಪ್ರಕಾರ ನಿರ್ಣಯಿಸಿದಾಗ, ಆ ವಿಷಯವನ್ನು ಬುದ್ಧಿ ಅಲ್ಲಿಯೇ ಇರುವ ಮನಸ್ಸಿಗೆ ತಿಳಿಸಿದಾಗ, ಮನಸ್ಸು ಆ ಸಮಾಚಾರವನ್ನು ಶರೀರಕ್ಕೆ ಹೊರಗೆ ಅಂಟಿಕೊಂಡಿರುವ ಕರ್ಮೇಂದ್ರಿಯಗಳಿಗೆ ತಿಳಿಸುತ್ತದೆ. ಒಳಗಿನ ಬುದ್ಧಿಯಿಂದ ಬಂದಿರುವ ಆಜ್ಞೆ ಪ್ರಕಾರ ಹೊರಗಿನ ಶರೀರ, ಕರ್ಮೇಂದ್ರಿಯಗಳು ಕೆಲಸ ಮಾಡುತ್ತವೆ. ಹೊರಗಿನ ಜ್ಞಾನೇಂದ್ರಿಯಗಳ ಸಮಾಚಾರವನ್ನು ಮನಸ್ಸು ಒಳಗೆ ಬುದ್ಧಿಗೆ ತಿಳಿಸುವುದೂ, ಒಳಗಿನ ಬುದ್ಧಿ ಗುಣಗಳಿಂದ ಆಲೋಚಿಸಿ, ಚಿತ್ತವು ಬಲಪಡಿಸಿದ ತನ್ನ ಆಲೋಚನೆಯನ್ನು ಬುದ್ಧಿ, ಮನಸ್ಸಿಗೆ ತಿಳಿಸುವುದೂ, ಮನಸ್ಸು, ಬುದ್ಧಿ ತಿಳಿಸಿದ ವಿಷಯವನ್ನು ಹೊರಗಿನ ಕರ್ಮೇಂದ್ರಿಯಗಳಿಗೆ ತಿಳಿಸುವುದೂ ಹಿಂದೆಹಿಂದೆಯೇ ನಡೆದು ಹೋಗುತ್ತಿರುತ್ತದೆ. ಇದೆಲ್ಲವೂ ಒಂದು ಅಥವಾ ಎರಡು ಸೆಕೆಂಡುಗಳಲ್ಲಿ ನಡೆದು ಹೋಗುತ್ತದೆ. ಶರೀರದ ಮೇಲೆ ನೊಣ ಕೂತಿದೆಯೆಂದು ಚರ್ಮ ತಿಳಿಸಿದಾಗ ಆ ವಿಷಯವನ್ನು ಮನಸ್ಸು ಬುದ್ಧಿಗೆ ತಿಳಿಸಿದಾಗ, ಬುದ್ಧಿ ಗುಣಗಳ ಮಧ್ಯದಲ್ಲಿ

ಆಲೋಚಿಸಿ, ಚಿತ್ತವು ಬಲಪಡಿಸಿರುವುದನ್ನು ಮನಸ್ಸಿಗೆ ತಿಳಿಸಿದಾಗ, ಮನಸ್ಸು ಕರ್ಮೇಂದ್ರಿಯವಾದ ಕೈಗೆ, ವಿಷಯವನ್ನು ತಿಳಿಸಿದಾಗ, ಬುದ್ಧಿವೊಂದರ ಆಜ್ಞೆಯನ್ನು ಕೈಗಳು ಶೇಕರಿಸಿ ಕೂಡಲೇ ನೊಣವನ್ನು ಹೊಡೆಯುವುದೊ, ಸಾಯಿಸುವುದೊ ನಡೆಯುತ್ತದೆ. ಮುಖ್ಯವಾಗಿ ಗಮನಿಸಿದರೆ ನೊಣದ ವಿಷಯ ಒಳಗೆ ಹೋಗಿ ಪುನಃ ಆಜ್ಞೆಯಾಗಿ ಬರುವುದು ಒಂದು ಸೆಕೆಂಡು ಕಾಲದಲ್ಲಿಯೇ ನಡೆದುಹೋಗಿದೆ. ಮನಸ್ಸು ಒಳಗಿನ ಸಮಾಚಾರವನ್ನು ಹೊರಗೆ, ಹೊರಗಿನ ಸಮಾಚಾರವನ್ನು ಒಳಗೆ ತಿಳಿಸುವುದಕ್ಕೆ ಬಹಳ ವೇಗವಾಗಿ ಕೆಲಸ ಮಾಡುತ್ತಾ, ಸೆಕೆಂಡುಕಾಲದಲ್ಲಿಯೇ ನಡೆದುಹೋಗುವಂತೆ ಮಾಡುತ್ತದೆ. ಆದ್ದರಿಂದ ಮೇಲೆ ಹೇಳಿದ ಒಗಟಿಗೆ ಪೂರ್ತಿ ಆಧ್ಯಾತ್ಮಿಕ ಉತ್ತರವಾಗಿ ಮನಸ್ಸು ಇದೆಯೆಂದು ಹೇಳಬಹುದು. ಅಲ್ಲಿ ಮಾತನಾಡಿದರೆ ಇಲ್ಲಿ ಕೇಳಿಸುತ್ತೇನೆ. ಇಲ್ಲಿ ಮಾತನಾಡಿದರೆ ಅಲ್ಲಿ ಕೇಳಿಸುತ್ತೇನೆ ಎನ್ನುವ ಮಾತು ಪ್ರಪಂಚದಲ್ಲಿ ಸೆಲ್‌ಫೋನಾಗಿದ್ದರೂ, ಆಧ್ಯಾತ್ಮಿಕದಲ್ಲಿ ಮನಸ್ಸಾಗಿ ಇದೆಯೆಂದು ಗಟ್ಟಿಯಾಗಿ ಹೇಳಬಹುದು.

**ಜ್ಞಾನವನ್ನು ನಿಧಾನವಾಗಾದರೂ ಒಂದುಸಲ ಅರ್ಥ ಮಾಡಿಕೊ, ಶಾಶ್ವತವಾಗಿರುತ್ತದೆ.**

## 6. ಆಕಾಶದಲ್ಲಿ ಅರವತ್ತಾರು ಕುಡುಗೋಲುಗಳು, ಯಾವುವು?

"ಹೆಜ್ಜೆ ತಪ್ಪಿದರೆ ಅರವತ್ತಾರು ಗುಣಗಳು" ಎಂಬ ಗಾದೆಯನ್ನು ವಿವರಿಸಿ **"ಗಾದೆಗಳ ಜ್ಞಾನ"** ಎನ್ನುವ ನಮ್ಮ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಆದ್ದರಿಂದ ಅದೇ ವಿಷಯವನ್ನೆ ಇಲ್ಲಿ ಜ್ಞಾಪಕ ಮಾಡುತ್ತಿದ್ದೇವೆ ಹೊರತು ದೊಡ್ಡ ವಿವರವಾಗಿ ಬರೆಯುತ್ತಿಲ್ಲ. ಅರವತ್ತಾರು ಕುಡುಗೋಲು ಎಂದು ಇಲ್ಲಿ ಹೇಳಿದ್ದಾರೆ. ಗಾದೆಯಲ್ಲಿ ನೇರವಾಗಿ ಅರವತ್ತಾರು ಗುಣಗಳು ಎಂದು ಹೇಳಿದ್ದಾರೆ. ಗುಣಗಳು ಮನುಷ್ಯನಿಗೆ ಅರವತ್ತಾರು ಎಲ್ಲಿಯೂ ಇಲ್ಲ. ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು ಎಂದು ಎರಡು ವಿಧಗಳ ಗುಣಗಳು ಇವೆ. ಗುಣಗಳು ಆರು ಮತ್ತು ಆರಾಗಿ ಇವೆ. ಅಷ್ಟೇ ಹೊರತು ಅರವತ್ತಾರಾಗಿ ಇಲ್ಲವೆಂದು ಹೇಳುವುದಾಗಿದೆ. ಅಷ್ಟೇ ಅಲ್ಲದೆ, ಗುಣಗಳು ಶರೀರಕ್ಕೆ ಮೇಲಿರುವ ತಲೆಯಲ್ಲಿ ಗುಣ ಚಕ್ರದಲ್ಲಿ ಇವೆ.

ಮೇಲೆ ಇರುವುದರಿಂದ ಮತ್ತು ಗುಣಗಳು ಕಣ್ಣಿಗೆ ಕಾಣಿಸದಂತೆ ಇರುವುದರಿಂದ **"**ಆಕಾಶದಲ್ಲಿ ಅರವತ್ತಾರು ಕುಡುಗೋಲು**"** ಎಂದು ಹೇಳಿದ್ದಾರೆ. ಅಷ್ಟೇ ಹೊರತು ಗುಣಗಳು ಆಕಾಶದಲ್ಲಿ ಇಲ್ಲ. ಗುಣಗಳೆಲ್ಲ ನಮ್ಮ ತಲೆಯಲ್ಲಿಯೇ ಇವೆ. ತಲೆಯಲ್ಲಿರುವ ಗುಣಗಳು ಆರು ಮತ್ತು ಆರಾಗಿ ಇವೆ. 6+6=12 ಪ್ರತಿ ಗುಣ ಭಾಗದಲ್ಲಿಯು ಒಟ್ಟು 12 ಗುಣಗಳಿವೆ, ಮೂರು ಗುಣ ಭಾಗಗಳಲ್ಲಿಯೂ 6+6=12x3=36. ಒಟ್ಟು ಮೂವತ್ತಾರು ಗುಣಗಳು ಮೂರು ಭಾಗಗಳಲ್ಲಿಯೂ ಇರುವಂತೆ ತಿಳಿಯುತ್ತಿವೆ. ಪೂರ್ತಿ ಸಮಾಚಾರಕ್ಕಾಗಿ **"ಗಾದೆಗಳ ಜ್ಞಾನ"** ಎನ್ನುವ ಗ್ರಂಥವನ್ನು ಓದಿರಿ.

**ಆಹಾರವೆನ್ನುವ ಜೀವನದ ನಂತರ,**
**ನೀರೆನ್ನುವ ಮರಣವನ್ನು ಕುಡಿಯದೆ ತಪ್ಪುವುದಿಲ್ಲ.**

## 7. ಊರೆಲ್ಲಾ ತಿರುಗಿಬಂದು ಮೂಲೆಯಲ್ಲಿ ನಿಂತಿದೆ, ಏನು?

ಈ ಒಗಟು ಪ್ರಶ್ನೆಗೆ ಉತ್ತರವಾಗಿ, ಪ್ರಪಂಚರೀತಿಯಲ್ಲಿ ಕೈಗೋಲು ಎಂದು ಹೇಳುತ್ತಿದ್ದಾರೆ. ಬಹುಶಃ ಅದೇ ನಿಜವೆಂದು ನಂಬುತ್ತಿದ್ದೇವೆ. ಈಗ ನಮಗೆ ಬೇಕಾಗಿರುವುದು ಆಧ್ಯಾತ್ಮಿಕ ಉತ್ತರ. ಆದ್ದರಿಂದ ಆತ್ಮ ಜ್ಞಾನದೃಷ್ಠಿಯಿಂದ ನೋಡಿದಾಗ ಸ್ವಲ್ಪ ಸಮಾಚಾರ ಈ ವಿಧವಾಗಿ ತಿಳಿಯುತ್ತಿದೆ. ಊಟೆ ಇರುವುದು ಊರು, ಎನ್ನುವ ಮಾತಿನ ಪ್ರಕಾರ ನೋಡಿದರೆ ನಮ್ಮ ಶರೀರವೇ ಒಂದು ಊರಾಗಿದೆ. ಏಕೆಂದರೇ, ನಮ್ಮ ಶರೀರದಲ್ಲಿ ಏಳು ಊಟೆಗಳಿರುವುದರಿಂದ ಶರೀರವನ್ನು, ಊರು ಎಂದು ಹೇಳಬಹುದು. ನಮ್ಮ ಶರೀರದಲ್ಲಿ ಏಳು ಮುಖ್ಯವಾದ ಗ್ರಂಥಿಗಳು ಇವೆ. ಬಾಯಲ್ಲಿ ಎರಡು ದವಡೆಗಳ ಕೆಳಗಿರುವ ಲಾಲಾಜಲಗ್ರಂಥಿಗಳಿಂದ ಲಾಲಾಜಲ ಊರುವುದು ಎಲ್ಲರಿಗೂ ತಿಳಿದ ವಿಷಯವೇ. ಶರೀರ ಊರಾಗಿ ಇರುವಾಗ, ಅದರಲ್ಲಿ ಜೀವಿಯು ಮತ್ತು ಜೀವಿಯೊಂದಿಗೆ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಮೊದಲಾದ 24 ಚೈತನ್ಯ ಭಾಗಗಳು ನಿವಾಸಿಸುತ್ತಿವೆ. ಒಟ್ಟು 25 ಜನರಿಗೆ ನಿವಾಸವಾಗಿರುವ ಶರೀರದಲ್ಲಿ ಕೆಲವರು (ಕೆಲವು ಭಾಗಗಳು) ಮುಖ್ಯವಾದ ಪಾತ್ರವನ್ನು ಪೋಷಿಸುತ್ತಿದ್ದಾರೆ.

ಅದರಲ್ಲಿ ಒಂದೊಂದು ಒಂದೊಂದು ಕೆಲಸವನ್ನು ಮಾಡುತ್ತಾ ಚೆನ್ನಾಗಿ ಗುರುತು ಹೊಂದಿರುವವು ಇವೆ. ಅಂತಹವುಗಳಲ್ಲಿ ಮನಸ್ಸು, ಬುದ್ಧಿ, ಅಹಂ ಎನ್ನುವ ಮೂರು, ಮುಖ್ಯವಾದ ಪಾತ್ರಗಳನ್ನು ಪೋಷಿಸುತ್ತಿವೆ. ಈ ಮೂರು, ಮೂರು ಯೋಗಗಳಿಗೆ ಕಾರಣವಾಗಿವೆ. ಈ ಮೂರು, ಜೀವಿಯನ್ನು ಯೋಗಿಯಾಗಿ ಬದಲಿಸಿ ದೇವರಕಡೆಯಾದರೂ ಕಳಿಸಬಲ್ಲವು, ಇಲ್ಲದಿದ್ದರೆ ಪ್ರಪಂಚದಕಡೆ ದೃಷ್ಠಿಯನ್ನುಂಟುಮಾಡಿ ರೋಗಿಯಾಗಿ, ಭೋಗಿಯಾಗಾದರೂ ಮಾರ್ಪಡಿಸಬಲ್ಲವು. ಮನಸ್ಸಿಂದ ಬ್ರಹ್ಮಯೋಗಿಯಾಗಿ, ಅಹಮ್ ನಿಂದ ಕರ್ಮಯೋಗಿಯಾಗಿ, ಬುದ್ಧಿಯಿಂದ ಭಕ್ತಿಯೋಗಿಯಾಗಿ ಮನುಷ್ಯ ಬದಲಾಗಬಲ್ಲನು. ಇಲ್ಲದಿದ್ದರೆ ಮನಸ್ಸು, ಬುದ್ಧಿ, ಅಹಮ್‌ನಿಂದ ಪೂರ್ತಿಯಾಗಿ ಪ್ರಪಂಚ ಮಾಯೆಯಲ್ಲಾದರೂ ಮುಳುಗಿಹೋಗಬಲ್ಲನು. ಮನಸ್ಸು ಮನುಷ್ಯನಿಗೆ ಅನುಕೂಲಿಸಿದರೆ ಬ್ರಹ್ಮಯೋಗಿ ಆಗಬಲ್ಲನು. ಅನುಕೂಲಿಸದೆ ಹೋದರೆ ಕರ್ಮವನ್ನನುಸರಿಸಿ ರೋಗಿಯಾಗಿಯೋ, ಭೋಗಿಯಾಗಿಯೋ ಇದ್ದುಹೋಗುತ್ತಾನೆ. ಶರೀರದಲ್ಲಿ ಮನಸ್ಸಿನ ಪಾತ್ರ ಎಂಥಾದ್ದೊ ಪರಿಶೀಲಿಸಿ ನೋಡೋಣ.

ಮನಸ್ಸು ಶರೀರವೆಲ್ಲಾ ವ್ಯಾಪಿಸಿದ ಗಾಳಿಯಂಥಾದ್ದು, ಮನಸ್ಸು ಶರೀರವೆಲ್ಲ ವ್ಯಾಪಿಸಿದ್ದು, ಶರೀರದಲ್ಲಿನ ಹೊರಗಿನ ವಿಷಯಗಳನ್ನು ಒಳಗಿನ ಬುದ್ಧಿಗೆ, ಒಳಗಿನ ವಿಷಯಗಳನ್ನು ಹೊರಗಿನ ಜ್ಞಾನೇಂದ್ರಿಯಗಳಿಗೆ ಸೇರಿಸುವ ಮಧ್ಯವರ್ತಿಯಂತೆ ಇದೆ. ಮನಸ್ಸಿಗೆ ಮೂರು ಅವಸ್ಥೆಗಳು ಇವೆ. ಒಂದು ಎಚ್ಚರ, ಎರಡು ನಿದ್ರೆ, ಮೂರು ಸ್ವಪ್ನ. ಮುಖ್ಯವಾಗಿ ಎಚ್ಚರದಲ್ಲಿ ಮನಸ್ಸು ಶರೀರವೆಲ್ಲಾ ವ್ಯಾಪಿಸಿ, ಬಾಹ್ಯರಂಗ ಅವಯವಗಳಿಗು, ಅಂತರಂಗ ಅವಯವಗಳಿಗು ವಾರ್ತೆಗಳನ್ನು ಸೇರಿಸುತ್ತಿರುತ್ತದೆ. ಅಷ್ಟೇ ಅಲ್ಲದೆ ನಡೆದ ವಿಷಯಗಳನ್ನು ಮನನ (ಜ್ಞಾಪಕ) ಮಾಡುತ್ತಿರುತ್ತದೆ. ಮುಂಬರುವಂತಹ ವಿಷಯಗಳನ್ನು ಕುರಿತು ಕೂಡಾ ಜ್ಞಾಪಕ ಮಾಡುತ್ತಿರುತ್ತದೆ. ಹೀಗೆ ಶರೀರದಲ್ಲಿ, ಬಿಡುವಿನ ಸಮಯದಲ್ಲಿ ಗತವನ್ನು, ಭವಿಷ್ಯತ್ತನ್ನು ಮನನ ಮಾಡುತ್ತಾ, ಉಳಿದ ಸಮಯಗಳಲ್ಲಿ ಒಳಗಿನ ವಿಷಯಗಳು ಹೊರಗೆ, ಹೊರಗಿನ ವಿಷಯಗಳು ಒಳಗೆ ಕಳಿಸುತ್ತಿರುತ್ತದೆ. ಈ ವಿಧವಾಗಿ ಎಚ್ಚರದಲ್ಲಿ ಶರೀರವೆಲ್ಲಾ ವ್ಯಾಪಿಸಿದ ಮನಸ್ಸು, ನಿದ್ರೆ ಸಮಯದಲ್ಲಿ

ಶರೀರದಲ್ಲಿರುವುದೆಲ್ಲಾ ಮುದುಡಿಕೊಂಡು, ಸೂಜಿ ಮೊನೆಗಿಂತ ಚಿಕ್ಕ ಬಿಂದುವಾಗಿ ಬದಲಾಗಿಹೋಗಿ, ಬ್ರಹ್ಮನಾಡಿಯಲ್ಲಿ ಏಳನೆಕೇಂದ್ರದಲ್ಲಿ ಅಡಗಿಹೋಗುತ್ತಿದೆ. ಆಗ ಯಾವ ವಿಷಯವನ್ನೂ ಮನಸ್ಸು ಜೀವಿಗೆ ತಿಳಿಸುವುದಿಲ್ಲ. ಆದ್ದರಿಂದ ನಿದ್ರೆಯಲ್ಲಿ ಹೊರಗಿನ ವಿಷಯಗಳು ಯಾವುವು ತಿಳಿಯುವುದಿಲ್ಲ. ಮನಸ್ಸು ಬ್ರಹ್ಮನಾಡಿಯಲ್ಲಿ ಮೇಲೆ ಒಂದುಕಡೆ ನಿಂತುಹೋಗುವುದರಿಂದ, "ಊರೆಲ್ಲಾ ತಿರುಗಿಬಂದು ಮೂಲೆಯಲ್ಲಿನಿಂತಿದೆ" ಎಂದು ಮನಸ್ಸನ್ನು ಕುರಿತು ಹೇಳಿದ್ದಾರೆ. ಶರೀರ ಜೀವಿಗೇ ಅಲ್ಲದೆ ಮನಸ್ಸಿಗು ಕೂಡಾ ಊರಿನಂಥಾದ್ದು. ಆದ್ದರಿಂದ ಮನಸ್ಸನ್ನು ಊರೆಲ್ಲ ತಿರುಗಿದೆಯೆಂದು ಹೇಳಿದ್ದಾರೆ. ಬ್ರಹ್ಮನಾಡಿಯಲ್ಲಿ ಮೇಲೆ ಏಳನೆ ಕೇಂದ್ರದಲ್ಲಿ, ಯಾರಿಗೂ ತಿಳಿಯದ ಜಾಗದಲ್ಲಿ ಮನಸ್ಸು ಒಂದು ಬಿಂದುವಿನಂತೆ ಬದಲಾಗಿ ಅಡಗಿಹೋಗುತ್ತಿದೆ. ಆದ್ದರಿಂದ ಮೂಲೆಯಲ್ಲಿ ಬಿದ್ದಿದೆ ಎಂದು ಮನಸ್ಸನ್ನು ಕುರಿತು ಹೇಳಿದಂತೆ ತಿಳಿಯುತ್ತಿದೆ. ಒಂದು ರಹಸ್ಯವನ್ನು ಮರೆಯಿಂದ ಹೊರಗಿನ ಭಾವವನ್ನು ಅಡ್ಡ ಇಟ್ಟು ಹೇಳಿ, ಅದು ಏನು ಎಂದು ಕೇಳುವುದರಿಂದ ಒಗಟಿನಲ್ಲಿನ ರಹಸ್ಯ ಹೊರಬೀಳಬಲ್ಲದು. ಗಾದೆಗಳು, ಒಗಟುಗಳು ಅಣ್ಣತಮ್ಮಂದಿರಂತೆ ಇದ್ದು, ಬ್ರಹ್ಮವಿದ್ಯೆಯಲ್ಲಿನ ರಹಸ್ಯ ಗಳನ್ನು ಪ್ರಪಂಚ ವಿಷಯಗಳಿಂದ ಮುಚ್ಚಿ ಹೇಳುತ್ತಿವೆ. ಮೇಲ್ನೋಟಕ್ಕೆ ನೋಡಿದರೆ ಪ್ರಪಂಚ ವಿಷಯ ಅರ್ಥವಾಗಬಲ್ಲದು. ಅದನ್ನೇ ಆಳವಾಗಿ ನೋಡಿದರೆ ಬ್ರಹ್ಮಜ್ಞಾನ ಅರ್ಥವಾಗಬಲ್ಲದು.

**ಅಜ್ಞಾನವನ್ನು ಇಲ್ಲದಂತೆ ಮಾಡಿಕೊಳ್ಳುವುದೇ, ಜ್ಞಾನವನ್ನು ಸಂಪಾದಿಸಿಕೊಳ್ಳುವುದು.**

## 8. ಎಲ್ಲಿಗೆ ಹೋದರೂ ಹಿಂದೆ ಬರೋದು, ಯಾವುದು?

ಈ ಒಗಟು ಪ್ರಶ್ನೆಗೆ ಪ್ರಪಂಚ ರೀತಿಯಲ್ಲಿ ಕೆಲವರು ನೆರಳು ಎಂದು ಉತ್ತರವನ್ನು ಬರೆದಿಟ್ಟಿದ್ದಾರೆ. ಬೆಳಕು ಇದ್ದಾಗ ನೆರಳು ಇರುತ್ತದೆ ಹೊರತು, ಬೆಳಕು ಇಲ್ಲದಿರುವಾಗ ನೆರಳು ಇರುವುದಕ್ಕೆ ಅವಕಾಶವೇ ಇರುವುದಿಲ್ಲ ಅಲ್ಲವೆ! ಆದ್ದರಿಂದ ಈ ಒಗಟು ಪ್ರಶ್ನೆಗೆ, ನೆರಳು ಎನ್ನುವ ಉತ್ತರ ಪೂರ್ತಿ ಸರಿಯಾದುದು ಅಲ್ಲವೆಂದೇ ಹೇಳಬಹುದು. ಪ್ರಪಂಚ ಸಂಬಂಧವಾದ ಉತ್ತರ ಏನಾದರೂ

ಫಲವಾಗಿಲ್ಲ ಆದರೆ, ಜ್ಞಾನ ಸಂಬಂಧ ಉತ್ತರ ಮಾತ್ರ ಪೂರ್ತಿ ಸರಿಯಾದುದಾಗಿ ಇರಬೇಕು. ಮನುಷ್ಯ ಹುಟ್ಟಿ ಬೆಳೆಯುತ್ತಾ ಬರುತ್ತಿದ್ದಾನೆ. ಹಾಗೆ ಬೆಳೆಯುತ್ತಾ, ಚಿಕ್ಕ ವಯಸ್ಸಿನಿಂದ ತನ್ನ ಧ್ಯಾಸವೆಲ್ಲವನ್ನು ಹೊರಗಿನ ಪ್ರಪಂಚದಲ್ಲಿಯೇ ಲಗ್ನ ಮಾಡಿ, ಪ್ರಪಂಚ ವಿದ್ಯೆಗಳನ್ನು ಕಲಿಯುವುದರಲ್ಲಿಯೇ ಕಾಲ ಕಳೆಯುತ್ತಿದ್ದಾನೆ. ಅದರಿಂದ ಆತನಿಗೆ ಪ್ರಪಂಚ ವಿಷಯಗಳೇ ತಿಳಿಯುತ್ತಿವೆ. ಆದರೆ ತನ್ನ ವಿಷಯ ತನಗೆ ಸ್ವಲ್ಪವೂ ತಿಳಿಯದೇ ಹೋಗಿದೆ. ಚಿಕ್ಕಂದಿನಿಂದ ಹೊರಗಿನ ಧ್ಯಾಸಹೊಂದಿದ ಮನುಷ್ಯ, ತನ್ನನ್ನು ಕುರಿತು ಪೂರ್ತಿಯಾಗಿ ಮರೆತುಹೋಗಿದ್ದಾನೆ. ಆದ್ದರಿಂದ ತಾನು ಯಾರಾಗಿರುವುದು, ತಾನು ಎಲ್ಲಿಂದ ಬಂದಿರುವುದು, ಪುನಃ ಎಲ್ಲಿಗೆ ಹೋಗುವುದು ತಿಳಿಯದಂತೆ ಹೋಗಿದೆ. ತನ್ನನ್ನು ಕುರಿತು, ಶರೀರವೇ ತಾನು ಎಂದುಕೊಳ್ಳುವುದು ಪ್ರತಿ ಮನುಷ್ಯನಿಗೂ ತಿಳಿದಿದೆ. ವಾಸ್ತವಕ್ಕೆ ಯಾರೂ ಶರೀರವಲ್ಲ. ಶರೀರ ಬೇರೆ, ತಾನು ಬೇರೆಯೆಂದು ಯಾರಿಗೂ ತಿಳಿಯದೇ ಹೋಗಿದೆ.

ಯಾವ ಮನುಷ್ಯನಾದರೂ ತನ್ನನ್ನು ಕುರಿತು ತಾನು ತಿಳಿದುಕೊಳ್ಳಬೇಕೆಂದರೆ, ದೇವರು ಗೀತೆಯಲ್ಲಿ ತಿಳಿಸಿದ ಜ್ಞಾನವನ್ನು ತಿಳಿಯಬೇಕು. ಹಾಗೆ ಭಗವದ್ಗೀತೆಯಲ್ಲಿನ ಜ್ಞಾನವನ್ನು ತಿಳಿದರೆ, ತಾನು ಶರೀರದಲ್ಲಿ ಒಂದು ಚಿಕ್ಕ ಭಾಗವಾದ ಜೀವಾತ್ಮನೆಂದು, ತಾನು ಶರೀರವು ಅಲ್ಲವೆಂದು, ತನ್ನಂತೆ ಎಷ್ಟೋ ಭಾಗಗಳು ಬೆರೆತು ಒಂದು ಶರೀರವಾಗಿದೆಯೆಂದು ತಿಳಿಯಬಲ್ಲನು. ಆಗ ತನ್ನನ್ನು ನಡೆಸುತ್ತಿರುವ ಒಂದು ಆತ್ಮ ಶರೀರಕ್ಕೆಲ್ಲ ಅಧಿಪತಿಯಾಗಿ ಇದೆಯೆಂದು, ಆತ್ಮ ತನ್ನೊಂದಿಗೆ ಜನ್ಮ ಜನ್ಮಕ್ಕೂ ಬಿಡದಂತೆ ಬರುತ್ತಿದೆಯೆಂದು ತಿಳಿಯುತ್ತದೆ. ಹುಟ್ಟಿದಾಗ, ಜೀವಾತ್ಮವನ್ನು ಆತ್ಮವೇ ಹಳೆ ಶರೀರದಿಂದ ತೆಗೆದುಕೊಂಡು ಬಂದು ಹೊಸ ಶರೀರದೊಳಗೆ ಸೇರಿಸುತ್ತಿದೆಯೆಂದು, ಶರೀರದಲ್ಲಿ ಆತ್ಮವೇ ಅಧಿಪತಿಯಾಗಿದ್ದು, ಶರೀರ ಭಾಗಗಳಿಗೆಲ್ಲಾ ಶಕ್ತಿಯನ್ನು ಕೊಟ್ಟು ಕದಲಿಸಿ ನಡೆಸುತ್ತಿದೆಯೆಂದು, ಕೊನೆಯಲ್ಲಿ ನಂತರ ಜನ್ಮಕ್ಕೆ ತೆಗೆದುಕೊಂಡು ಹೋಗುವುದು ಆತ್ಮವೇ ಎಂದು ತಿಳಿಯುತ್ತದೆ. ಬ್ರಹ್ಮವಿದ್ಯೆಯನ್ನು ಕಲಿಯುವುದರಿಂದ ಜೀವಿಗೆ ಸಂಬಂಧಿಸಿದ ವಿಷಯವೆಲ್ಲವೂ ತಿಳಿಯುತ್ತಿದೆ. ಆತ್ಮ, ಜೀವಾತ್ಮಗಳ ಸಂಬಂಧವನ್ನು

ಕುರಿತು, ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆನ್ನುವ ಅಧ್ಯಾಯದಲ್ಲಿ 16 ನೇ ಶ್ಲೋಕದಲ್ಲಿ ಹೀಗೆ ಇದೆ.

**ಶ್ಲೋ॥ ದ್ವಾವಿಮೌ ಪುರುಷೌ ಲೋಕೇಕ್ಷರಶ್ಚಾಕ್ಷರ ಏವಚ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ॥**

**ಭಾವಾರ್ಥ :–** ಲೋಕದಲ್ಲಿನ ಪುರುಷರು ಎರಡು ವಿಧಗಳಿದ್ದಾರೆ. ಒಬ್ಬನು ಕ್ಷರ ಪುರುಷನೆಂದು, ಎರಡನೆಯವನು ಅಕ್ಷರ ಪುರುಷನೆಂದು ಹೇಳಲ್ಪಡುತ್ತಿದ್ದಾರೆ. ಕ್ಷರಪುರುಷನಾದ ಜೀವಾತ್ಮ, ಸರ್ವಜೀವರಾಶಿಗಳಲ್ಲಿಯೂ ಇದ್ದಾನೆ. ಅಕ್ಷರ ಪುರುನಾದ ಆತ್ಮ, ಜೀವಾತ್ಮದೊಂದಿಗೆ ಕೂಟಸ್ಥನಾಗಿದ್ದಾನೆ. ಕೂಟಸ್ಥನು ಎಂದರೇ ಕೂಡಿಕೊಂಡು ಇರುವವನು ಅಥವಾ ಕೂಡಿರುವವನೆಂದು ಹೇಳಬಹುದು. ಪುರುಷರಾಗಿರುವವರು ಜೀವಾತ್ಮ ಮತ್ತು ಆತ್ಮ ಮಾತ್ರವೇ. ಆತ್ಮ ಜೀವಾತ್ಮದೊಂದಿಗೆ ಕೂಡಿರುವುದರಿಂದ, ಜೀವಾತ್ಮ ಯಾವ ಜನ್ಮಕ್ಕೆ ಹೋದರೆ ಆತ್ಮ ಕೂಡಾ ಜೀವಿಯೊಂದಿಗೆ ಹೋಗುತ್ತದೆ. ಸಾವಿನಲ್ಲಿಯೂ, ಜನ್ಮದಲ್ಲಿಯೂ, ಆತ್ಮ ಜೀವಿಯನ್ನು ಬಿಡದೆ ಇರುವುದರಿಂದ, ಜೀವಿಯು ಎಲ್ಲಿಗೆ ಹೋದರೂ ಹಿಂದೆ ಹೋಗುವುದು ಆತ್ಮವೇ ಎಂದು ಹೇಳಬಹುದು. ಶರೀರದಲ್ಲಿ ಜೀವಿಯೊಂದಿಗೆ 24 ಭಾಗಗಳಿದ್ದರೂ, ಮರಣದಲ್ಲಿ ಎಲ್ಲಾ ಶರೀರದೊಂದಿಗೆ ಮರಣಿಸುತ್ತವೆ. ಮರಣದಲ್ಲಿ ಉಳಿದಿರುವುದು ಜೀವಾತ್ಮ, ಆತ್ಮ ಮಾತ್ರವೇ. ಶರೀರದಲ್ಲಿ ಭಾಗವಾಗದೆ ಇರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಸಮುದಾಯದಲ್ಲಿನ ಕರ್ಮ, ಗುಣಗಳು ಜೀವಿಯಹಿಂದೆ ಆತ್ಮ ತೆಗೆದುಕೊಂಡು ಬರುತ್ತಿದೆ. ಹಾಗೇ ಗತಜನ್ಮದಲ್ಲಿ ಮಾಡಿಕೊಂಡ ಕರ್ಮಗಳನ್ನು ಕೂಡಾ ಆತ್ಮ ತೆಗೆದುಕೊಂಡು ಬಂದು ಮರುಜನ್ಮದಲ್ಲಿ ಇಡುತ್ತಿದೆ. ಹೀಗೆ ಆತ್ಮ, ಜೀವಾತ್ಮವನ್ನು ಬಿಡದಂತೆ ಜೀವಿಯ ಹಿಂದೆ ಬೀಳುತ್ತಿದೆ.

**ಜ್ಞಾನವನ್ನು ತಿಳಿದುಕೊಂಡರೆ ಅದೇ ಯೋಗವಾಗುತ್ತದೆ.**
**ಪ್ರತ್ಯೇಕಿಸಿ ಮಾಡುವುದು (ಕರ್ಮ) ಯೋಗವಲ್ಲ.**

## 9. ಎಷ್ಟು ಜನ ಏರಿದರೂ ಮುರಿಯುವುದಿಲ್ಲ ಏನು?

ಎಷ್ಟುಜನ ಏರಿದರೂ ಮುರಿಯದಿರುವುದು ಕಟ್ಟೆ ಎಂದು ಕೆಲವರು, ಭೂಮಿ ಎಂದು ಕೆಲವರು ಬಾಹ್ಯ ಪ್ರಪಂಚ ದೃಷ್ಠಿಯಿಂದ ಹೇಳಿದ್ದಾರೆ. ನಾವು ಹೇಳಿಕೊಳ್ಳಬೇಕಾಗಿರುವುದು ಆಧ್ಯಾತ್ಮಿಕ ದೃಷ್ಠಿಯಿಂದ, ಆದ್ದರಿಂದ ಆಧ್ಯಾತ್ಮಿಕವೆಲ್ಲಾ ಶರೀರದಲ್ಲಿಯೇ ಹುಡುಕಬೇಕು. ಆದ್ದರಿಂದ ಎಷ್ಟುಜನ ಹತ್ತಿದರೂ ಮುರಿಯದಿರು ವುದು ಶರೀರದಲ್ಲಿ ಏನಿದೆಯೋ ಗಮನಿಸೋಣ. ಎಷ್ಟುಜನ ಎಂದರೇ ಯಾರು? ಹತ್ತಿದರೂ ಎಂದರೆ ಯಾವುದರಮೇಲಕ್ಕೆ? ಮುರಿಯುವುದಿಲ್ಲ ಎಂದರೇ ಏನು ಮುರಿಯುವುದಿಲ್ಲ? ಹೀಗೆ ಪ್ರಶ್ನಿಸಿಕೊಂಡು ನೋಡಿದರೆ ಸ್ವಲ್ಪಮಟ್ಟಿಗೆ ಉತ್ತರ ಅರ್ಥವಾಗುತ್ತಿದೆ. ನಮ್ಮ ಶರೀರದಲ್ಲಿ ಮೂರುಲಕ್ಷ ಐವತ್ತುಸಾವಿರ (3,50,000) ನಾಡಿಗಳು ಇವೆ. ಅದರಲ್ಲಿ ಮುಖ್ಯವಾದವು 72,000. ಅವುಗಳಲ್ಲಿ ಇನ್ನೂ ಮುಖ್ಯವಾದವು ಹತ್ತು (10) ಮಾತ್ರವೇ ಇವೆ. ಅವುಗಳಲ್ಲಿ ಅತಿ ಮುಖ್ಯವಾದವು ಮೂರು ಮಾತ್ರ ಇವೆ. ಅವುಗಳೇ ಸೂರ್ಯನಾಡಿ, ಚಂದ್ರನಾಡಿ, ಬ್ರಹ್ಮನಾಡಿ ಎಂದು ಕರೆಯಲ್ಪಡುತ್ತಿವೆ. ಈ ಮೂರು ನಾಡಿಗಳಲ್ಲಿ ಮುಖ್ಯವಾದುದು ಬ್ರಹ್ಮನಾಡಿ. ಬ್ರಹ್ಮನಾಡಿ ಎಂದರೇ ದೊಡ್ಡ ನಾಡಿ ಎಂದು ಅರ್ಥ. ಈ ದೊಡ್ಡನಾಡಿ, ಶರೀರದ ಮಧ್ಯದಿಂದ ತಲೆಯವರೆಗು ವ್ಯಾಪಿಸಿದೆ. ತಲೆಯವರೆಗಿರುವ ಬ್ರಹ್ಮನಾಡಿ, ಏಳು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಮೇಲೆ ತಲೆಯಲ್ಲಿ ಏಳನೇ ಭಾಗವಿದೆ. ಆ ಏಳನೇ ಭಾಗದಲ್ಲಿ ಬ್ರಹ್ಮನಾಡಿಗೆ ನಾಲ್ಕು ಚಕ್ರಗಳು ಜೋಡಿಸಲ್ಪಟ್ಟಿವೆ. ನಾಲ್ಕು ಚಕ್ರಗಳ ಚಿತ್ರವನ್ನು ನಂತರ ಪುಟದಲ್ಲಿ ನೋಡಬಹುದು. ಅದರಲ್ಲಿ ಗುಣಚಕ್ರವಾಗಿದ್ದು, ಅದಕ್ಕಿಂತ ಮೇಲಿರುವುದು ಕರ್ಮಚಕ್ರ.

ಈ ಕವರ್ಮಚಕ್ರದಲ್ಲಿಯೇ ಮನುಷ್ಯ ಮಾಡಿಕೊಂಡ ಪಾಪ ಪುಣ್ಯಗಳು ಸೇರಿಹೋಗುತ್ತಿವೆ. ಕರ್ಮಚಕ್ರ ಒಟ್ಟು ಹನ್ನೆರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ವಿಭಜಿಸಲ್ಪಟ್ಟ ಹನ್ನೆರಡು ಭಾಗಗಳಲ್ಲಿ, ಹನ್ನೆರಡು ವಿಧಗಳ ಕರ್ಮಗಳು ಸೇರಿಹೋಗುತ್ತಿವೆ. ಒಬ್ಬೊಬ್ಬ ಮನುಷ್ಯನ ಕರ್ಮಗಳು, ಒಂದೊಂದು ವಿಧವಾಗಿವೆ. ಎಲ್ಲರ ಶರೀರಗಳಲ್ಲಿ ಕರ್ಮಚಕ್ರ ಇದ್ದರೂ, ಒಬ್ಬನ ಕರ್ಮಚಕ್ರದಲ್ಲಿ ಹತ್ತು ಜನ್ಮಗಳಿಗೆ ಸರಿಹೋಗುವ ಕರ್ಮ ಸೇರಿರುವಾಗ, ಕೆಲವರ ಕರ್ಮಚಕ್ರದಲ್ಲಿ




**ನಾಲ್ಕು ಚಕ್ರಗಳ ಸಮುದಾಯ**

ಇನ್ನೂ ಹೆಚ್ಚಾಗಿರುತ್ತದೆ. ಇನ್ನೊಬ್ಬರ ಶರೀರದಲ್ಲಿನ ಕರ್ಮಚಕ್ರದಲ್ಲಿ ಸಾವಿರ ಜನ್ಮಗಳಿಗೆ ಸರಿಹೋಗುವ ಕರ್ಮ ಇರುವಾಗ, ಮತ್ತೊಬ್ಬನ ಕರ್ಮಚಕ್ರದಲ್ಲಿ ಹತ್ತುಸಾವಿರ ಜನ್ಮಗಳಿಗೆ ಸರಿಹೋಗುವ ಕರ್ಮ ನೆಲೆಯಿದೆ. ದೈವದೂಷಣೆ ಮಾಡಿದವನಿಗೆ, ಎರಡು ಯುಗಗಳು ಅನುಭವಿಸುವುದಕ್ಕೆ ಸರಿಹೋಗುವ ಕರ್ಮ ಸೇರಿದೆ. ನಂತರ ಪುಟದಲ್ಲಿ ಕರ್ಮಚಕ್ರ ವೊಂದರ ಆಕಾರವನ್ನು ನೋಡಬಹುದು.

ಕರ್ಮಚಕ್ರದಲ್ಲಿ ಎಷ್ಟು ಕರ್ಮ ಸೇರಿದರೂ ಅದರಲ್ಲಿ ಬೆರೆತು ಹೋಗುತ್ತಿರುತ್ತದೆ. ಕರ್ಮಚಕ್ರದಲ್ಲಿ ಜಾಗ ಕಡಿಮೆ ಬರುವ ಪ್ರಸ್ತಾಪವೇ ಇಲ್ಲ. ಕರ್ಮಚಕ್ರದಲ್ಲಿ ಕರ್ಮ ಸೇರಿದಂತೆಲ್ಲ, ಕರ್ಮಚಕ್ರಕ್ಕೆ ಭಾರ ಹೆಚ್ಚಾಗುತ್ತದೆನ್ನುವುದು ಕೂಡಾ ಇಲ್ಲ. ಕರ್ಮಚಕ್ರ ಎಷ್ಟುಸಾವಿರ ಜನ್ಮಗಳ ಕರ್ಮಗಳನ್ನಾದರೂ, ಲಕ್ಷಗಳ ಜನ್ಮಗಳ ಕರ್ಮಗಳನ್ನಾದರೂ ಹೋರುವ ಸಾಮರ್ಥ್ಯ ಹೊಂದಿರುತ್ತದೆ. ಎಷ್ಟು ವಿಧಗಳ ಪಾಪಗಳನ್ನಾದರೂ, ಎಷ್ಟು ವಿಧಗಳ ಪುಣ್ಯಗಳನ್ನಾದರೂ, ಹತ್ಯಾ ಪಾಪಗಳಾಗಲಿ, ಆರಾಧನೆಗಳ ಪುಣ್ಯಗಳಾಗಲಿ ಎಷ್ಟು ಏರಿದರೂ, ಕರ್ಮಚಕ್ರಕ್ಕೆ




**ಕರ್ಮಚಕ್ರ**

ಭಾರವಲ್ಲ. ಹಾಗೆಯೇ ಕರ್ಮಚಕ್ರವು ಮುರಿದುಹೋಗುವುದಿಲ್ಲ. ಆದ್ದರಿಂದ ಎಷ್ಟುಜನ ಏರಿದರೂ ಮುರಿಯುವುದಲ್ಲವೆಂದು ಕರ್ಮಚಕ್ರಕ್ಕೆ ಹೆಸರು ಬಂದಿದೆ.

**ಧೈರ್ಯವಂತನು ನಿಜವಾದ ತನ್ನ ಜ್ಞಾನವನ್ನು ಹೇಳಬಲ್ಲನು.**
**ಅಧೈರ್ಯವಂತನು ಪುಸ್ತಕದಲ್ಲಿನ ಜ್ಞಾನ ಹೇಳಬಲ್ಲನು.**

## 10. ಹಳ್ಳದಲ್ಲಿನ ಎತ್ತು ಎಷ್ಟು ಹಗ್ಗಗಳು ಹಾಕಿದರೂ ಬರುವುದಿಲ್ಲ, ಏನು?

ಇದಕ್ಕು ಮುನ್ನ ಹೇಳಿಕೊಂಡ ನಾಲ್ಕು ಚಕ್ರಗಳ ಚಿತ್ರಪಟವನ್ನು ನೋಡಿದ್ದೀರ ಅಲ್ಲವೆ! ಆ ನಾಲ್ಕು ಚಕ್ರಗಳಲ್ಲಿ ಕೆಳಗಿನ ಚಕ್ರವನ್ನು ಗುಣಚಕ್ರ

ಎಂದು ಕರೆಯುತ್ತೇವೆ. ಒಂದು ವಿಧವಾಗಿ ಈ ಚಕ್ರವನ್ನು ಮಾಯಚಕ್ರ ಎಂದು ಕೂಡಾ ಕರೆಯಬಹುದು. ಗುಣಚಕ್ರ ಮೂರು ಭಾಗಗಳಾಗಿ ಇದೆ. ಒಂದೊಂದು ಭಾಗದಲ್ಲಿ ಆರು ಒಳ್ಳೆಯ ಗುಣಗಳು, ಆರು ಕೆಟ್ಟ ಗುಣಗಳು, ಒಟ್ಟು ಹನ್ನೆರಡು ಗುಣಗಳು ಇವೆ. ಒಂದು ಭಾಗದಲ್ಲಿ 12 ಗುಣಗಳಿರುವಾಗ, ಒಂದೊಂದು ಗುಣ 9 ಭಾಗಗಳಾಗಿ ಸೀಳಿಹೋಗಿದೆ. ಆ ವಿಧವಾಗಿ 12 ಗುಣಗಳ ಸೀಳಿಕೆಗಳು (9x12=108) ಒಟ್ಟು 108 ಆಗಿ ಇವೆ. ಒಂದು ಭಾಗ 108 ಸೀಳಿಕೆಗಳಾಗಿರುವ ಗುಣಗಳು, 108 ವಿಧಗಳ ಕರ್ಮಗಳನ್ನು ತಂದಿಡುತ್ತಿವೆ. ಒಂದು ಭಾಗದಲ್ಲಿರುವ 108 ಗುಣಗಳ ಸಮುದಾಯ ಮಾಯೆ ಎಂದು ಕರೆಯಲ್ಪಡುತ್ತಿದೆ. ಮಾಯೆ, ಗುಣಗಳ ರೂಪದಲ್ಲಿ ಇದೆಯೆಂದು ಭಗವದ್ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಕೃಷ್ಣನು ಹೇಳಿದ ಶ್ಲೋಕದಲ್ಲಿ "ಗುಣಮಯಿ ಮಮ ಮಾಯಾ ದುರತ್ಯಯಾ" ಎಂದು ಹೇಳಲ್ಪಟ್ಟಿದೆ. ಆ ಮಾತನ್ನನುಸರಿಸಿ, ದೇವರು ತಯಾರು ಮಾಡಿಟ್ಟಿರುವ ಮಾಯೆ, ಗುಣಚಕ್ರದಲ್ಲಿ ಗುಣಗಳ ರೂಪದಲ್ಲಿ ಇದೆಯೆಂದು ತಿಳಿಯುತ್ತಿದೆ. "ಮಮ ಮಾಯಾ ದುರತ್ಯಯಾ" ಎನ್ನುವ ಮಾತನ್ನನುಸರಿಸಿ, ನನ್ನ ಮಾಯೆಯನ್ನು ಯಾರೂ ದಾಟಿ ಹೋಗಲಾರನು, ನನ್ನ ಮಾಯೆಯನ್ನು ಜಯಿಸಿ ಹೋಗುವುದು ದುಸ್ಸಾಧ್ಯ ಎಂದು ಸಹ ಹೇಳಲ್ಪಟ್ಟಿದೆ, ಮಾಯೆಯನ್ನು ನಾನು ಜಯಿಸಬಲ್ಲೆನು ಎಂದುಕೊಂಡವನು, ಎಲ್ಲರಿಗಿಂತ ಮೊದಲು ಮಾಯೆ ಕೈಯಲ್ಲಿ ಸೋತುಹೋಗುತ್ತಾನೆ. ಶರೀರದಲ್ಲಿನ ಜೀವಿಯು, ಗುಣಚಕ್ರದಲ್ಲಿ ಗುಣಗಳ ಮಧ್ಯದಲ್ಲಿ ಸಿಲುಕಿಕೊಂಡಿದ್ದಾನೆ ಆದ್ದರಿಂದ, ಮನುಷ್ಯ ಗುಣಗಳನ್ನು (ಮಾಯೆಯನ್ನು) ಜಯಿಸಲಾರನು. ಹಳ್ಳದಲ್ಲಿನ ಎತ್ತಿನಂತೆ, ಮಾಯೆ ತಲೆಯಲ್ಲಿನ ಗುಣಚಕ್ರದಲ್ಲಿ ನೆಲೆಗೊಂಡಿದೆ. ಅದನ್ನು ಜೀವಿಯು ಜಯಿಸಬೇಕೆಂದರೇ, ಹಳ್ಳದಲ್ಲಿನ ಎತ್ತಿಗಾಗಿ ಹಳ್ಳಕ್ಕೆ ಇಳಿದರೆ, ಹಳ್ಳದ ಪ್ರವಾಹಕ್ಕೆ ಇಳಿದವನು ಕೊಚ್ಚಿಕೊಂಡು ಹೋದಂತೆ, ಮಾಯೆ ಗುಣಗಳನ್ನು ಜಯಿಸಲು ಹೋಗಿ ಇನ್ನೂ ಮಾಯೆಯಲ್ಲಿ ಜೀವಿಯು ಬೆರೆತು ಹೋಗುತ್ತಿದ್ದಾನೆ. ಪ್ರಯತ್ನ ಮಾಡಿದಂತೆಲ್ಲ ಮಾಯೆ ಕೈಯಲ್ಲಿ ಮನುಷ್ಯನೇ ಸಿಲುಕಿಕೊಳ್ಳುತ್ತಿದ್ದಾನೆ. ಆದ್ದರಿಂದ ಗೀತೆಯಲ್ಲಿ ಕೂಡಾ ಕೃಷ್ಣನು 'ದುರತ್ಯಯಾ' ಎಂದು ಹೇಳಿದ್ದಾನೆ. ಅದರ ಅರ್ಥ ದುಸ್ಸಾಧ್ಯ ಇಲ್ಲವೆ ಸಾಧ್ಯವಲ್ಲ ಎಂದು ಅರ್ಥ. ಆದ್ದರಿಂದ ಹಳ್ಳದಲ್ಲಿನ

ಎತ್ತಿಗೆ ಮಾಯೆಯನ್ನು ವರ್ಣಿಸಿ ಹೇಳಿದ್ದಾರೆ. ಮನುಷ್ಯ ಎಷ್ಟು ಪ್ರಯತ್ನಗಳು ಮಾಡಿದರೂ ಎನ್ನುವಮಾತಿಗೆ, ಎಷ್ಟು ಹಗ್ಗಗಳು ಹಾಕಿದರೂ ಎಂದು ಹೇಳಿದ್ದಾರೆ. ತಲೆಯಲ್ಲಿನ ಮಾಯೆಯನ್ನು ಜಯಿಸುವುದು ಬಹಳ ಕಷ್ಟವಾದ ಕೆಲಸವೆಂದು ತಿಳಿಸುವ ಸಲುವಾಗಿ ಈ ಒಗಟನ್ನು ಹೇಳುವುದಾಗಿದೆ.

**ಉತ್ತಮ ಗ್ರಂಥ ಯೋಗಿವೊಂದರ ಶಕ್ತಿಯಿಂದ ಬರೆಯಲ್ಪಡುತ್ತಿದೆ.**

## 11. ಏನೇ ನೀನು ಅಡುಗೆ ಮಾಡಲಿಲ್ಲ, ಮಟ್ಟಲಿಲ್ಲ, ಮೂಗಿಗೇಕೆ ಮಸಿಯಾಗಿದೆ?

ನೀನು ಕೆಲಸವೇ ಮಾಡಲಿಲ್ಲ ಅಲ್ವಾ! ನಿನ್ನ ಕೈಯಿಗೆ ಮಣ್ಣೇತಕ್ಕೆ ಆಗಿದೆಯೆಂದು ಕೇಳಿದಂತಿದೆ ಅಲ್ಲವೇ! ಅಡುಗೆ ಮನೆಯಲ್ಲಿ ಕೆಲಸ ಮಾಡಿದ್ದರೆ ಮೂಗಿಗೊ, ಕೈಯಿಗೊ ಮಸಿ ಆಗಿದೆಯೆಂದರೆ ಒಂದು ಅರ್ಥವಿರುತ್ತದೆ. ಆದರೆ ಯಾವ ಕೆಲಸವನ್ನು ಮಾಡದಂತೆ ಮಣ್ಣು ಬಳಿದುಕೊಂಡರೂ, ಯಾವ ಅಡುಗೆ ಮಾಡದಿದ್ದರೂ ಮಸಿ ಬಳಿದುಕೊಂಡಿರುವುದಕ್ಕೆ ಅರ್ಥವೇ ಇಲ್ಲವೆಂದು ಹೇಳಬಹುದು. ಬೆಳಗ್ಗೆ ಎದ್ದಾಗಿನಿಂದ ಮನುಷ್ಯ ಎಷ್ಟೋ ಕೆಲಸಗಳು ಮಾಡುತ್ತಿದ್ದಾನೆ. ಮನುಷ್ಯ ಮಾಡುವ ಕೆಲಸಗಳಲ್ಲಿ ಒಳ್ಳೆಯ ಕೆಲಸಗಳೂ ಇವೆ, ಕೆಟ್ಟ ಕೆಲಸಗಳೂ ಇವೆ. ಭಯಂಕರವಾದ ಪಾಪ ಬರುವ ಕೆಲಸಗಳೂ ಇವೆ. ದೊಡ್ಡ ಪುಣ್ಯ ಬರುವ ಕೆಲಸಗಳೂ ಇವೆ. ಮನುಷ್ಯರು ಮಾಡುವ ಒಳ್ಳೆಯದು, ಕೆಟ್ಟಕೆಲಸಗಳು ಪ್ರತ್ಯಕ್ಷವಾಗಿ ಕಾಣಿಸುವವೇ ಆಗಿರುವುದರಿಂದ, ಇವನು ಪಾಪ ಮಾಡಿದ್ದಾನೆ, ಇವನು ಪುಣ್ಯ ಮಾಡಿದ್ದಾನೆ ಎಂದು ನೋಡಿದವರು ಹೇಳುತ್ತಿರುತ್ತಾರೆ. ಕಾಣಿಸುವುದು ಸತ್ಯವಾ? ಮನುಷ್ಯ ಒಳ್ಳೆಯ, ಕೆಟ್ಟಕೆಲಸಗಳು ಮಾಡುತ್ತಿದ್ದಾನಾ ಎಂದು ಆಲೋಚಿಸಿ ನೋಡಿದರೆ, ಕಾಣಿಸುವ ಮನುಷ್ಯ ಮಾಡುವ ಕೆಲಸಗಳನ್ನು ಜೀವಿಯು ಮಾಡಿದಂತೆನಾ? ಎಂದು ಪ್ರಶ್ನಿಸಿಕೊಂಡರೆ, ಅದನ್ನು ಸ್ವಲ್ಪ ವಿವರವಾಗಿ ಹೇಳಿಕೊಳ್ಳಬೇಕಾದ ಅವಶ್ಯಕತೆ ಇದೆ, ಅದೇನೆಂದರೇ!

ಮನುಷ್ಯ ಎಂದರೇ ಕೆಲವು ಭಾಗಗಳ ಜೋಡಣೆ ಎಂದು ಹೇಳಬಹುದು. ಮನುಷ್ಯ ಎಂದರೇ ಜೀವಿಯು ಒಬ್ಬನೇ ಅಲ್ಲವಲ್ಲ! ಜೀವಿಯಂತಹ ಭಾಗಗಳು

ಮತ್ತಷ್ಟು ಕೂಡಿ ಮನುಷ್ಯ ಆಗುತ್ತಿದ್ದಾನೆ. ಆಗಿರುವಾಗ, ಒಬ್ಬ ಮನುಷ್ಯ ಒಂದು ಕೆಲಸವನ್ನು ಮಾಡಿದ್ದಾನೆಂದರೆ, ಆ ಮನುಷ್ಯನಲ್ಲಿನ ಜೀವಿ ಒಬ್ಬನೇ ಆ ಕೆಲಸಕ್ಕೆ ಜವಾಬ್ಧಾರಿಯಲ್ಲ. ಆದ್ದರಿಂದ ಮನುಷ್ಯ ಮಾಡಿದಷ್ಟು ಮಾತ್ರಕ್ಕೆ ಜೀವಿಯು ಮಾಡಿದಂತೆ ಅಲ್ಲ. ಇಲ್ಲಿ ಕೆಲವರಿಗೆ ಜೀವಿಯು ಮಾಡದೆಹೋದರೆ ಯಾರು ಮಾಡಿದಂತೆ ಎಂದು ಪ್ರಶ್ನೆ ಬರುತ್ತದೆ. ಅದಕ್ಕೆ ನಮ್ಮ ಉತ್ತರ ಏನೆಂದರೇ! ಒಬ್ಬ ಮನುಷ್ಯ ಎಂದರೇ 25 ಭಾಗಗಳ ಜೋಡಣೆ ಆದಾಗ, ಒಂದು ಕೆಟ್ಟಕೆಲಸವನ್ನಾಗಲಿ, ಒಳ್ಳೆಯ ಕೆಲಸವನ್ನಾಗಲಿ ಮನುಷ್ಯ ಮಾಡಿದಾಗ, ಅದರಲ್ಲಿ ಯಾರ ಪಾತ್ರ ಎಷ್ಟು ಎಂದು ವಿಶ್ಲೇಷಿಸಿ ನೋಡಬೇಕಾಗಿರುತ್ತದೆ. ಒಂದು ಶರೀರದಲ್ಲಿ ಆತ್ಮಗಳು ಎರಡು ಇವೆ. ಒಂದು ಜೀವಾತ್ಮವಾಗಿದ್ದು, ಎರಡನೆಯದು ಆತ್ಮ. ಉಳಿದ ಶರೀರವೆಲ್ಲವೂ ಸ್ಥೂಲ, ಸೂಕ್ಷ್ಮ ಎಂದು ಎರಡು ಭಾಗಗಳಾಗಿ ಇದೆ. ಸ್ಥೂಲ, ಸೂಕ್ಷ್ಮ ಎನ್ನುವ ಎರಡು ಶರೀರ ಭಾಗಗಳು, ಜೀವಿಯು ವಿನಹಃ ಒಟ್ಟು 24 ಇವೆ. ಸ್ಥೂಲ ಶರೀರ ಐದು ಕರ್ಮೇಂದ್ರಿಯಗಳಾಗಿ, ಐದು ಜ್ಞಾನೇಂದ್ರಿಯಗಳಾಗಿ ಇದೆ. ಉಳಿದ ಹದಿನಾಲ್ಕರಲ್ಲಿ ಐದು ವಾಯುಗಳಾಗಿದ್ದು, ಐದು ಜ್ಞಾನೇಂದ್ರಿಯ ಶಕ್ತಿಗಳಾಗಿದ್ದು, ಉಳಿದ ನಾಲ್ಕು ಮನಸ್ಸು, ಬುದ್ಧಿ, ಚಿತ್ತವು, ಅಹಮ್ ಆಗಿವೆ.

ಶರೀರದಲ್ಲಿನ ಆತ್ಮ, ಒಟ್ಟಾರೆ ಶರೀರ ಭಾಗಗಳೆಲ್ಲವುಗಳಿಗೂ ಚೈತನ್ಯ ಶಕ್ತಿಯನ್ನು ಕೊಟ್ಟು, ಕದಲಿಸಿ ಕೆಲಸವನ್ನು ಮಾಡಿಸುತ್ತಿದೆ. ಶರೀರದಲ್ಲಿ ಯಾವ ಕೆಲಸವನ್ನಗಲಿ ಆತ್ಮ, ತನ್ನ ಇಷ್ಟ ಪ್ರಕಾರ ಮಾಡಿಸುವುದಿಲ್ಲ. ಜೀವಿಯೊಂದರ ಪ್ರಾರಬ್ಧಕರ್ಮ ಪ್ರಕಾರ ಇಂತಹ ಕೆಲಸ ಮಾಡಬೇಕೆಂದು ನಿರ್ಣಯವಾದಾಗ, ಆ ಕರ್ಮ ಪ್ರಕಾರ ಆತ್ಮ, ಶರೀರದಿಂದ ಕೆಲಸ ಮಾಡಿಸಿ, ಆ ಕಾರ್ಯ ನಡೆಯುವಂತೆ ಮಾಡುತ್ತಿದೆ. ಒಂದು ಕಾರ್ಯಕ್ಕೆ ಕರ್ಮ ಕಾರಣವಾಗಿದ್ದು, ಆಚರಣೆ ಅವಯವಗಳಾಗಿದ್ದು, ಶಕ್ತಿಯನ್ನು ಕೊಟ್ಟು ಆತ್ಮ ಶರೀರ ಭಾಗಗಳಿಂದ ಮಾಡಿಸುತ್ತಿದೆ. ಶರೀರದಲ್ಲಿನ ಜೀವಿಯು ಮಾತ್ರ ನಡೆಯುತ್ತಿರುವ ಕಾರ್ಯದಲ್ಲಿ ಎಲ್ಲಿಯೂ ಪಾಲ್ಗೊಳ್ಳುತ್ತಿಲ್ಲ. ನಡೆಯುತ್ತಿರುವ ಸಿನಿಮಾವನ್ನು ಒಬ್ಬ ಪ್ರೇಕ್ಷಕನು ನೋಡಿ, ಅದರಲ್ಲಿನ ಪಾತ್ರಗಳಿಗೆ, ನಟನೆಗೆ ಸ್ಪಂದಿಸಿ ಆಡುತ್ತಿರುವ ಆಟವನ್ನನುಸರಿಸಿ

ಸಂತೋಷ ಪಡುವುದೋ ಇಲ್ಲವೆ ದುಃಖ ಪಡುವುದೋ ನಡೆಯುತ್ತಿದೆ. ಕೆಲವು ದುಃಖಕರವಾದ ಸನ್ನಿವೇಶಗಳು ಬಂದಾಗ, ನೋಡುವ ಪ್ರೇಕ್ಷಕನು ಕೂಡಾ ಸ್ವಲ್ಪ ದುಃಖ ಪಡುವುದು ನಡೆಯುತ್ತಿದೆ. ಒಂದು ಸಿನಿಮಾವನ್ನು ನೋಡುತ್ತಿರುವವರು ಸನ್ನಿವೇಶವನ್ನನುಸರಿಸಿ ಅಳುವುದು, ನಗುವುದು ನಡೆಯುತ್ತಿರುವ ವಿಷಯ ಎಲ್ಲರಿಗೂ ತಿಳಿದಿದೆ. ನಡೆಯುತ್ತಿರುವ ಸನ್ನಿವೇಶದಲ್ಲಿ ಲಗ್ನವಾಗಿಹೋಗಿ, ನಾವು ಪ್ರೇಕ್ಷಕರು ಎನ್ನುವ ಮಾತನ್ನು ಮರೆತುಹೋಗಿ ನಗುವವರು, ಅಳುವವರು ಇರುವಂತೆ, ಜೀವಿಯು ಕೂಡಾ ಆತ್ಮ ಮಾಡಿಸುತ್ತಿರುವಾಗ, ಅವಯವಗಳು ಮಾಡುತ್ತಿರುವಾಗ, ನಡೆಯುತ್ತಿರುವ ಕಾರ್ಯಗಳನ್ನು ನೋಡಿ, ತಾನು ಬೇರೆಯಾಗಿರುವ ಜೀವಿಯೆಂದು ಮರೆತುಹೋಗಿ, ತಾನೇ ಆ ಕೆಲಸ ಮಾಡುತ್ತಿರುವಂತೆ ಅಂದುಕೊಳ್ಳುವುದು ನಡೆಯುತ್ತಿದೆ.

ಚಲನಚಿತ್ರದಲ್ಲಿ ಆಟಾಡುವವರು ಆಟಾಡುತ್ತಾ, ಹಾಡು ಹೇಳುವವರು ಹೇಳುತ್ತಾ, ಅಳುವವರು ಅಳುತ್ತಾ ಇದ್ದರೆ, ಸುಮ್ಮನೆ ನೋಡುವವನು ನೋಡದೆ, ತಾನು ಕೂಡಾ ಅವರೊಂದಿಗೆ ನಗುತ್ತಾ ಅಳುತ್ತಾ ಇದ್ದರೆ "ಅಡುಗೆ ಮಾಡಲಿಲ್ಲ, ಮಟ್ಟಲಿಲ್ಲ, ಮೂಗಿಗೆ ಮಸಿ ಆಗಿದೆಯೆನ್ನುವಂತಿದೆ" ಜೀವಿಯು ಶರೀರದಲ್ಲಿ ನಡೆಯುವ ಕಾರ್ಯಗಳನ್ನು ತಾನೇ ಮಾಡಿದಂತೆ ಭ್ರಮಿಸುತ್ತಿದ್ದಾನೆ. ಆದ್ದರಿಂದ ಕರ್ಮಪ್ರಕಾರ ನಡೆದ ಕಾರ್ಯದಲ್ಲಿನ ಒಳ್ಳೆಯ, ಕೆಟ್ಟ ಫಲಿತಗಳಾದ ಪಾಪಪುಣ್ಯಗಳನ್ನು, ತನ್ನ ತಲೆಮೇಲೆ ಹಾಕಿಕೊಳ್ಳುತ್ತಿದ್ದಾನೆ. ಒಬ್ಬ ಸಿನಿಮಾವನ್ನು ನೋಡುತ್ತಿರುವಾಗ, ಮನುಷ್ಯ ಪೂರ್ತಿಯಾಗಿ ಲಗ್ನವಾಗಿಹೋಗಿ ನಕ್ಕರೂ, ಅತ್ತರೂ ಆ ಸಿನಿಮಾ ಮುಗಿದುಹೋಗುವವರೆಗೆ. ಸಿನಿಮಾ ಮೂರು ಗಂಟೆಗಳು ಸಾಗಿದರೆ ಅಲ್ಲಿಯವರೆಗು ಅದರಲ್ಲಿ ಲಗ್ನವಾದವನು ಸಿನಿಮಾ ಮುಗಿದುಹೋದ ನಂತರ ಅದರಿಂದ ಹೊರಬಂದು ಅದು ಬೇರೆ, ನಾನು ಬೇರೆ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಆದರೇ ಮನುಷ್ಯ, ಜೀವನ ಎನ್ನುವ ಸಿನಿಮಾವನ್ನು ನೋಡುತ್ತಾ ತನ್ನ ಮೇಲೆ ತನಗೆ ಧ್ಯಾಸವಿಲ್ಲದೆ ಜೀವನದಲ್ಲಿ ಲಗ್ನವಾಗಿಹೋಗಿದ್ದಾನೆ. ಪಕ್ಕದವನು ಕರೆದರೂ ಕೇಳುವ ಸ್ಥಿತಿಯಲ್ಲಾಗಲಿ ಮಾತನಾಡುವ ಸ್ಥಿತಿಯಲ್ಲಾಗಲಿ ಇಲ್ಲ. ಅಂತಹವನನ್ನು ನೋಡಿದ ಕೆಲವರು ಜ್ಞಾನಿಗಳು, ಒಗಟನ್ನು ಹೇಳಿ

ಪ್ರಶ್ನಿಸಬೇಕೆಂದುಕೊಂಡಿದ್ದಾರೆ. ಆ ಪ್ರಯತ್ನದಲ್ಲಿಯೇ "ನೀನು ಅಡುಗೆ ಮಾಡಲಿಲ್ಲ, ಮಟ್ಟಲಿಲ್ಲ ಮೂಗಿಗೇಕೆ ಮಸಿಯಾಗಿದೆ" ಎಂದು ಕೇಳಿದ್ದಾರೆ. ತನ್ನ ಸ್ಥಿತಿಯನ್ನು ತಾನು ಮರೆತುಹೋಗಿ, ತನ್ನನ್ನು ಮತ್ತೊಂದು ಸ್ಥಿತಿಯಲ್ಲಿ ಊಹಿಸಿಕೊಳ್ಳುವು ದರಿಂದ ತನಗೆ ಸಂಬಂಧವಿಲ್ಲದ ಕೆಲಸಗಳನ್ನು ಮಾಡಿದ್ದೇನೆಂದು ಒಪ್ಪಿಕೊಳ್ಳುವು ದರಿಂದ, ಮಾಡದ ತಪ್ಪುಗಳಿಗೆ ಜೀವಿಯು ಜವಾಬ್ದಾರಿ ಆಗುತ್ತಿದ್ದಾನೆಂದು ತಿಳಿಸುವ ಉದ್ದೇಶವು ಈ ಒಗಟಿನಲ್ಲಿ ಕಾಣಿಸುತ್ತಿದೆ. ಎಷ್ಟೋ ದೊಡ್ಡ ಜ್ಞಾನವನ್ನು ತಿಳಿಸಿ, ಮನುಷ್ಯನನ್ನು ಜಾಗ್ರತೆಗೊಳಿಸುವ ಒಗಟನ್ನು ತಯಾರು ಮಾಡಿರುವುದಕ್ಕೆ ನಮ್ಮ ಹಿರಿಯರಿಗೆ ಋಣಪಟ್ಟಿದ್ದೇವೆ.

**ರಚಯಿತರು ಎರಡು ವಿಧಗಳು ಇದ್ದಾರೆ. ಇತರರು ಹೇಳಿರುವುದು ಹೇಳುವವನು ಒಬ್ಬನು. ಯಾರೂ ಹೇಳದಿರುವುದು ಹೇಳುವವನು ಮತ್ತೊಬ್ಬನು.**

## 12. ಯಾವ ಪಾಟು ತಪ್ಪಿದರೂ ಈ ಪಾಟು ತಪ್ಪಲಿಲ್ಲ.

ಮನುಷ್ಯ ಹುಟ್ಟಿದಾಗಿನಿಂದ ಎಷ್ಟೋ ಪಾಟುಗಳು ಬೀಳುತ್ತಿದ್ದಾನೆ. ಅದರಲ್ಲಿ ಆಗಾಗ ತಪ್ಪುಗಳು ಸಹ ಮಾಡುತ್ತಿರುತ್ತಾನೆ. ಗ್ರಹಪಾಟು ಇಲ್ಲದ ಮನುಷ್ಯ, ಪೊರಪಾಟು ಬೀಳದ ಮನುಷ್ಯ ಭೂಮಿಮೇಲೆ ಇಲ್ಲವೆನ್ನುವ ನಾಣ್ನುಡಿ ಇದೆ. ಈ ಒಗಟಿನ ಪ್ರಶ್ನೆಗೆ ಉತ್ತರ ಪ್ರಪಂಚ ರೀತಿಯಲ್ಲಿ ತಪ್ಪಾದರೂ, ಆತ್ಮಜ್ಞಾನವನ್ನು ಅನುಸರಿಸಿ ಮತ್ತೊಂದು ಉತ್ತರ ಇರಲೇಬೇಕು. ಅದು ಏನೆಂದು ನೋಡಿದಾಗ ಮನುಷ್ಯ ಗತಜನ್ಮದಲ್ಲಿ ಮಾಡಿಕೊಂಡ ಕರ್ಮಪ್ರಕಾರ, ಪ್ರಸ್ತುತ ಜನ್ಮದೊಳಗೆ ಬರುತ್ತಿದ್ದಾನೆ. ಪ್ರಸ್ತುತ ಜನ್ಮದಲ್ಲಿ ಮಾಡಿಕೊಂಡು ಕರ್ಮ ಪ್ರಕಾರ, ಮುಂಬರುವಂತಹ ಜನ್ಮಕ್ಕೆ ಹೋಗುತ್ತಿದ್ದಾನೆ. ಒಂದು ಜನ್ಮದಲ್ಲಿ ಮರಣಿಸಿದ ನಂತರ ಮತ್ತೊಂದು ಜನ್ಮವನ್ನು ಹೊಂದಬೇಕಾಗಿದೆ. ಮನುಷ್ಯ ಜನ್ಮಿಸಬೇಕೆಂದರೇ, ಅದಕ್ಕಿಂತ ಮೊದಲ ಕ್ಷಣದಲ್ಲಿ ಮರಣಿಸಿರಬೇಕು. ಒಂದು ಜನ್ಮದಲ್ಲಿ ಮರಣಿಸಬೇ ಕೆಂದರೇ ಅದಕ್ಕಿಂತ ಮೊದಲು ಜನ್ಮಿಸಿರಬೇಕು. ಜನ್ಮ ಇಲ್ಲದ್ದು ಮರಣವಿಲ್ಲ, ಮರಣವಿಲ್ಲದ್ದು ಜನ್ಮವಿಲ್ಲ. ಜನನ ಮರಣಗಳೆರಡೂ ಅವಿನಾಭಾವ ಸಂಬಂಧ ವಾದವೆಂದು ತಿಳಿಯುತ್ತಿದೆ. ಆದ್ದರಿಂದ ಜನನ ಮರಣಗಳನ್ನು ಕುರಿತು ತಿಳಿದವರು

ಯಾರೂ ಚಿಂತಿಸುವುದಿಲ್ಲ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ, ಸಾಂಖ್ಯಯೋಗ ಎನ್ನುವ ಅಧ್ಯಾಯದಲ್ಲಿ 27ನೇ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ.

**ಶ್ಲೋ॥ ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯಚ।**
**ತಸ್ಮಾದ ಪರಿಹಾರ್ಯೇರ್ಥೇ ನತ್ವಂ ಶೋಚಿತು ಮರ್ಹಸಿ॥**

**ಭಾವಾರ್ಥ:–** ಹುಟ್ಟುವುದು ಸಾಯುವುದಕ್ಕಾಗಿಯೇ, ಸಾಯುವುದು ಪುನಃ ಹುಟ್ಟುವುದಕ್ಕೆ. ಆದ್ದರಿಂದ ಅನಿವಾರ್ಯವಾದ ಜನನ ಮರಣಗಳನ್ನು ಕುರಿತು ನೀನು ಚಿಂತಿಸುವುದು ಸರಿಯಲ್ಲ. ಮನುಷ್ಯ ಸಂಪಾದಿಸಿಕೊಂಡ ಕರ್ಮ ವನ್ನನುಸರಿಸಿ, ಮನುಷ್ಯ ಅನುಭವಿಸುವ ಸುಖ ದುಃಖಗಳು ಇರುತ್ತವೆ. ಆದರೇ ಸಾವು ಹುಟ್ಟುಗಳೆರಡೂ ಕರ್ಮ ಅನುಭವಕ್ಕೆ ಅತೀತವಾದವೆಂದು ಹೇಳಬಹುದು. ಮನುಷ್ಯ ಮಾಡಿಕೊಂಡ ಕರ್ಮವನ್ನು, ಜ್ಞಾನಾಗ್ನಿಯಿಂದ ಸುಟ್ಟುಹಾಕಿಕೊಳ್ಳ ಬಹುದು. ಯಾವ ಕರ್ಮವನ್ನಾದರೂ ತನ್ನ ಜ್ಞಾನದಿಂದ ಅನುಭವಿಸದಂತೆ ತಪ್ಪಿಸಿಕೊಳ್ಳಬಹುದು. ಜನನ ಮರಣಗಳು ಕರ್ಮದೊಳಗಿನವು ಅಲ್ಲ. ಆದ್ದರಿಂದ ಅವುಗಳನ್ನು ಎಂಥಹ ಜ್ಞಾನಿಯಾದರೂ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಎಂಥಹ ಜ್ಞಾನಿಯಾದರೂ ಮರಣವನ್ನು ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ದೇವರೇ ಬಂದು ಹುಟ್ಟಿದರೂ, ಆತನು ಕೂಡಾ ಮರಣಿ ಸಬೇಕಾಗಿದ್ದೆ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು, ಅದೇನೆಂದರೇ! ಕ್ರೈಸ್ಥವ ಪ್ರವಕ್ತನಾದ ಯೇಸು ಪ್ರಭು ಮರಣಿಸಲಿಲ್ಲ ಅಲ್ಲವೆ! ಮರಣವನ್ನು ಜಯಿಸಿ ಮೂರುದಿನಗಳಿಗೆ ಪುನಃ ಎದ್ದು ಬಂದಿದ್ದಾನೆ ಅಲ್ಲವೇ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ದೇವರು ಏರ್ಪಡಿಸಿದ ಕಾನೂನನ್ನು ದೇವರು ಕೂಡಾ ಅತಿಕ್ರಮಿಸುವುದಿಲ್ಲ. ಚೆನ್ನಾಗಿ ಆಲೋಚಿಸಿದರೆ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ, ಹುಟ್ಟಿದವನ್ಯಾರಾದರೂ ಸಾಯದೆ ತಪ್ಪುವುದಿಲ್ಲ. ಎನ್ನುವುದು ಶಾಸನ. ಯೇಸು ಪ್ರಭು ಮೊದಲು ತಾತ್ಕಾಲಿಕ ಮರಣವನ್ನು ಹೊಂದಿ, ಮೂರನೆ ದಿನ ಎದ್ದುಬಂದಿರುವ ಮಾತು ನಿಜವೇ. ಆದರೆ ಆತನು ಆಗ ಮರಣವನ್ನು ಹೊಂದಲಿಲ್ಲ. ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆಂದು

ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಹಾಗೆ ತಾತ್ಕಾಲಿಕ ಮರಣವನ್ನು ಹೊಂದಿದವನು, ಬೆಳಗ್ಗೆ ಮರಣಿಸಿ ಸಾಯಂಕಾಲ ಬದುಕಿದ ಸಂಘಟನೆಗಳು ಕೆಲವು, ಎರಡು ದಿನಗಳಿಗೆ ಬದುಕಿರುವವು ಕೆಲವು, ವಾರ, ಹತ್ತು ದಿನಗಳಿಗೆ ಬದುಕಿರುವವು ಕೆಲವು ಚರಿತ್ರೆಯಲ್ಲಿ ಇವೆ. ಗತವಾರದಲ್ಲಿ ತಮಿಳುನಾಡು ರಾಷ್ಟ್ರದಲ್ಲಿ ಕರೂರು ಜಿಲ್ಲೆ, ಕಟ್ಟಲೈ ಗ್ರಾಮಕ್ಕೆ ಸೇರಿದ ಮುತ್ತುಸ್ವಾಮೀ (50), ದಿನಾಂಕ: 09:07:2012. ಸೋಮವಾರ ಮರಣಿಸಿ ಮಂಗಳವಾರ ಚಿತಿ ಮೇಲೆ ಇಟ್ಟನಂತರ ಎದ್ದ ಸಂಘಟನೆ ಸಹಾ ಇದೆ. ಅದನ್ನು ಮರಣ ಎನ್ನುವುದಿಲ್ಲ. ತಾತ್ಕಾಲಿಕ ಮರಣ ಎನ್ನುತ್ತೇವೆ. ಮನುಷ್ಯನಿಗೆ ಇರುವ ಮೂರು ವಿಧಗಳ ಮರಣಗಳಲ್ಲಿ ತಾತ್ಕಾಲಿಕ ಮರಣ ಒಂದಾಗಿದ್ದು, ಅಕಾಲ ಮರಣ ಮತ್ತೊಂದು ಇದೆ. ಕಾಲ ಮರಣ ಮೂರನೆಯದು. ಮರಣ ಹೊಂದಿದ ನಂತರ ಯಾರೂ ಬದುಕುವುದಕ್ಕೆ ಸಾಧ್ಯವಿಲ್ಲ. ಯೇಸುಪ್ರಭು ಒಂದುಸಲ ತಾತ್ಕಾಲಿಕಮರಣ ಹೊಂದಿ ಮೂರು ದಿನಗಳಿಗೆ ಎದ್ದು, ನಂತರ ಕೆಲವು ವರ್ಷಗಳಿಗೆ ಮರಣಿಸಿದ್ದಾನೆ. ಆತನು ಪುನಃ ಎದ್ದನಂತರ ಕೇವಲ 40 ದಿನಗಳು ಮಾತ್ರವೇ ಶಿಷ್ಯರು ಆತನನ್ನು ನೋಡಿದ್ದಾರೆ. ನಂತರ ಆತನು ಅಲ್ಲಿರುವವರಿಗೆ ಯಾರಿಗೂ ಕಾಣಿಸಲಿಲ್ಲ. ಆದ್ದರಿಂದ ಆತನು ಯಾವಾಗ ಮರಣಿಸಿರುವುದು, ಎಲ್ಲಿ ಮರಣಿಸಿರುವುದು ಕ್ರೈಸ್ಥರಾದವರಿಗೆ ಬಹಳ ಜನರಿಗೆ ತಿಳಿದಿಲ್ಲ.

ಭೂಮಿಮೇಲೆ ಎಂಥಹ ಜ್ಞಾನವನ್ನು ಸಂಪಾದಿಸಿಕೊಂಡರೂ, ಯೋಗಿಯಾಗಿ ಬದಲಾಗಿ ಕರ್ಮವನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿ ಕೊಂಡರೂ, ಪುನಃ ಹುಟ್ಟದ ಮೋಕ್ಷವನ್ನು ಹೊಂದುವುದಕ್ಕೆ ಅರ್ಹನಾದರೂ, ಆತನು ಮರಣಿಸಿದ ನಂತರವೇ ಅವೆಲ್ಲವೂ ನಡೆದು ಪುನಃ ಹುಟ್ಟದಂತೆ ಹೋಗುತ್ತಾನೆ. ಆದ್ದರಿಂದ ಮರಣವನ್ನು ಯಾರೂ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಮರಣವಾಗಲಿ, ಹುಟ್ಟುವುದಾಗಲಿ ಕರ್ಮಬದ್ಧವಲ್ಲ. ಆದ್ದರಿಂದ ಯಾವ ಜೀವಿಯಾದರೂ ಮರಣವನ್ನು ಅನುಭವಿಸುವುದಾಗಲಿ, ಹುಟ್ಟುವುದನ್ನು ಅನುಭವಿಸುವುದಾಗಲಿ ನಡೆಯುವುದಿಲ್ಲ. ಮನುಷ್ಯ ಮರಣವನ್ನು ಹೊಂದಿದರೂ, ಅದರಲ್ಲಿನ ಅನುಭವವನ್ನು ಜೀವಿಯು ಅನುಭವಿಸುವುದಿಲ್ಲ. ಹಾಗೇ ಮನುಷ್ಯ

ಹುಟ್ಟಿದಾಗಲೂ ಸಹಾ ಹುಟ್ಟಿನ ಸ್ಥಿತಿಯಲ್ಲಿನ ಅನುಭೂತಿಯನ್ನು ಕೂಡಾ ಜೀವಿಯು ಅನುಭವಿಸುವುದಿಲ್ಲ. ಆದ್ದರಿಂದ ಸಾವುಹುಟ್ಟುಗಳು ಕರ್ಮಕ್ಕೆ ಅತೀತವಾದವೆಂದು ಹೇಳುತ್ತಿದ್ದೇವೆ. ಅಷ್ಟೇಅಲ್ಲದೆ ಹುಟ್ಟಿದವನು ತನ್ನ ಜ್ಞಾನದಿಂದ ಎಂಥಹ ಕರ್ಮದಿಂದಾದರೂ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿದೆ. ಆದರೆ ಮರಣದಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ಒಗಟಿನಲ್ಲಿ " ಯಾವ ಪಾಟು ತಪ್ಪಿದರೂ, ಈ ಪಾಟು ತಪ್ಪುವುದಿಲ್ಲ" ಎಂದು ಬರೆದಿದ್ದಾರೆ. ಇದು ಮರಣ ರಹಸ್ಯವನ್ನು ತಿಳಿಸುವ ಒಗಟಾಗಿದೆಯೆಂದು ತಿಳಿಯುತ್ತಿದೆ.

**ನಿನ್ನನ್ನು ನೀನು ಮೋಸಮಾಡಿಕೊಳ್ಳಲಾರೆ. ಹಾಗೇ ನಿನ್ನ ಆತ್ಮವನ್ನು ಮೋಸ ಮಾಡಲಾರೆ. ಪರಮಾತ್ಮನನ್ನು ಯಾರೂ ಮೋಸ ಮಾಡಲಾರರು.**

## 13. ಏಳು ಎಲೆಗಳ ಆಲದಮರವನ್ನು ಹತ್ತಬಾರದು, ಇಳಿಯಬಾರದು. ಎಲ್ಲಿದೆ?

ಆಲದಮರ ಎಂದರೇ ದೊಡ್ಡ ಬುಡಹೊಂದಿದ್ದು ಅನೇಕ ಊಡುಗಳು ಹೊಂದಿರುವ ಬಲವಾದ ವೃಕ್ಷವೆಂದು ಹೇಳದೆಯೇ ಅರ್ಥವಾಗುತ್ತದೆ. ವೃಕ್ಷ ಬಲವಾದುದು ಆದಾಗ ಎಲೆಗಳು ಏಳೇ ಇರುವುದು ವಿಶೇಷ. ಆಲದಮರ ಬಲವಾದುದಾಗಿ ಇರುತ್ತದೆ, ಆದ್ದರಿಂದ ಅದನ್ನು ಹತ್ತಬಹುದು, ಇಳಿಯಬಹುದು. ಆದರೇ ವಿಚಿತ್ರವಾಗಿ ಈ ಒಗಟಿನಲ್ಲಿ ಹತ್ತಬಾರದು, ಇಳಿಯಬಾರದು ಎಂದಿದ್ದಾರೆ. ಎಲೆಗಳು ಏಳು ಇದ್ದು, ಹತ್ತಬಾರದ್ದು, ಇಳಿಯಬಾರದ್ದು ಆದಾಗ, ಅದು ಆಲದ ಮರವೇನಾ ಎಂದು ಅನುಮಾನ ಬಾರದೆ ಇರುವುದಿಲ್ಲ. ಆಧ್ಯಾತ್ಮಿಕ ಜ್ಞಾನದ ಪ್ರಕಾರ ಆಲದಮರ ಯಾವುದೋ, ಎಲ್ಲಿದೆಯೋ ಅದರ ವಿವರವೇನೊ ಪರಿಶೀಲಿಸೋಣ. ಮನುಷ್ಯನ ಶರೀರಕ್ಕು, ಆಲದ ವೃಕ್ಷಕ್ಕು ಎಷ್ಟೋ ಹೋಲಿಕೆಗಳಿರು ವಂತೆ ಅನೇಕ ಕಥೆಗಳಲ್ಲಿ ಹೇಳಿಕೊಂಡಾಗ ಕೇಳಿದ್ದೇವೆ. ಅವರು ಹೇಳಿದ ಹೋಲಿಕೆಗಳು ವಾಸ್ತವವೋ ಅಲ್ಲವೋ, ಆದರೆ ನನಗೆ ತಿಳಿದ ಮಟ್ಟಿಗೆ ಮರದಲ್ಲಿರುವ ಜೀವಿಗೆ, ನಮ್ಮ ಶರೀರದಲ್ಲಿರುವ ಜೀವಿಗೆ ಕರ್ಮದಲ್ಲಿ ವ್ಯತ್ಯಾಸ ಇರಬಹುದು. ಆತ್ಮದಲ್ಲಿ ಏನು ವ್ಯತ್ಯಾಸ ಇರುವುದಿಲ್ಲ. ನಮ್ಮ ಶರೀರದಲ್ಲಿನ

ಆತ್ಮಕ್ಕೆ ಗುರುತಾಗಿ ಕೂದಲು ಇವೆ. ಕೂದಲಿಗು, ಆತ್ಮ ಎನ್ನುವ ಶಬ್ದಕ್ಕು ಹತ್ತಿರವಾಗಿರುವ ಶಬ್ದದಿಂದ ಮತ್ತೊಂದು ಹೆಸರು ಇದೆ. ಹಾಗೆಯೇ ಮರದಲ್ಲಿನ ಆತ್ಮಗೆ ಗುರುತಾಗಿ ಎಲೆಗಳಿವೆ. ಮರ ಸಜೀವವಾದುದೇ, ಮನುಷ್ಯ ಸಜೀವಾದವನೇ. ಮರದಲ್ಲಿನ ಜೀವಿಗೆ, ಮನುಷ್ಯನಲ್ಲಿನ ಜೀವಿಗೆ ಕರ್ಮದಲ್ಲಿ ಎಷ್ಟೋ ವ್ಯತ್ಯಾಸ ಇರುವುದರಿಂದ ಮರವೊಂದರ ಶರೀರ ನಿರ್ಮಾಣವೇ ಬೇರೆಯಾಗಿದೆ. ಮರ, ಮನುಷ್ಯನಿಗೆ ಎಷ್ಟೋ ಭಿನ್ನವಾಗಿ ಇರುತ್ತದೆ. ಮನುಷ್ಯನ ಶರೀರದಲ್ಲಿ ನಾಡಿ ವ್ಯವಸ್ಥೆ ಇದೆ. ಮರದಲ್ಲಿ ಮಾತ್ರ ನಾಡಿ ವ್ಯವಸ್ಥೆ ಇಲ್ಲ. ಆದರೆ ಆತ್ಮ ಇರುವ ವಿಧಾನವೆಲ್ಲಾ ಬೇರೆಯಾಗಿರುತ್ತದೆ. ಈಗ ನಾವು ಹೇಳಿಕೊಳ್ಳಬೇಕಾಗಿರುವುದು ಮನುಷ್ಯನಲ್ಲಿನ ನಾಡಿವ್ಯವಸ್ಥೆಯನ್ನು ಕುರಿತು. ನಾಡಿ ವ್ಯವಸ್ಥೆ ಮೂಲಕವೇ ಆತ್ಮ ಶರೀರವೆಲ್ಲಾ ಹರಡಿದೆ. ಆತ್ಮ ಎಲ್ಲಿಂದ ಎಲ್ಲಿಯವರೆಗು ಹರಡಿದೆ ಎಂದರೇ! ಮನುಷ್ಯನ ತಲೆ ಮಧ್ಯಭಾಗದಿಂದ ಪ್ರಾರಂಭವಾಗಿ, ಶರೀರದ ಹೊರಗಿನ ಅಂಚಿನಲ್ಲಿರುವ ಚರ್ಮದವರೆಗು ಹರಡಿದೆ, ಹಾಗೇ ಚರ್ಮದ ಮೇಲೆ ಇರುವ ಕೂದಲವರೆಗು ಹರಡಿದೆ. ಹಾಗೆ ಹರಡುವುದಕ್ಕೆ ಆತ್ಮಗೆ, ತಲೆಯಿಂದ ಪ್ರಾರಂಭವಾದ ನಾಡಿಗಳೇ ಆಧಾರ.

ತಲೆಯಿಂದ ಗುದಸ್ಥಾನದವರೆಗು ಇರುವ ಬೆನ್ನುಮೂಳೆಯಲ್ಲಿ ಬೆನ್ನುಉರಿ ಎನ್ನುವ ದೊಡ್ಡ ನರವಿದೆ. ಆ ನರವು, ತಲೆ ಮಧ್ಯದಿಂದ ಪ್ರಾರಂಭವಾಗಿ ಬೆನ್ನುಉರಿ ಕೊನೆಯವರೆಗೂ ವ್ಯಾಪಿಸಿದೆ. ತಲೆಯಿಂದ ಗುದಸ್ಥಾನದವರೆಗೂ ವ್ಯಾಪಿಸಿದ ದೊಡ್ಡನರವನ್ನೇ ಬ್ರಹ್ಮನಾಡಿಯೆಂದು, ಸುಷುಮ್ನನಾಡಿಯೆಂದು ಕರೆಯುತ್ತಾರೆ. ಬ್ರಹ್ಮನಾಡಿ ಒಟ್ಟು ಏಳು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಒಂದೊಂದು ಭಾಗಕ್ಕು ಒಂದೊಂದು ನಾಡಿಕೇಂದ್ರ ಏರ್ಪಟ್ಟಿದೆ. ಬ್ರಹ್ಮನಾಡಿಯಲ್ಲಿ ಏಳು ಕೇಂದ್ರಗಳು ಇವೆ. ಮೇಲೆ ಏಳನೆ ಕೇಂದ್ರದಲ್ಲಿ ಆತ್ಮ ನಿವಾಸವಾಗಿದ್ದು, ಅಲ್ಲಿಂದ ತನ್ನ ಶಕ್ತಿಯನ್ನು ಏಳು ನಾಡಿಕೇಂದ್ರಗಳ ಮೂಲಕ ಶರೀರವೆಲ್ಲ ಪ್ರಸಾರಮಾಡುತ್ತಿದೆ. ನಾಡಿಕೇಂದ್ರದ ಮೂಲಕ ಹೊರಟ ನರಗಳು, ಶರೀರವೆಲ್ಲಾ ವ್ಯಾಪಿಸಿರುವುದರಿಂದ ಆತ್ಮಶಕ್ತಿ ಶರೀರವೆಲ್ಲಾ ಹರಡುತ್ತಿದೆ. ಮೇಲೆ ತಲೆಯಲ್ಲಿರುವ ಏಳನೆ ಕೇಂದ್ರದಲ್ಲಿ ಆತ್ಮದೊಂದಿಗೆ ಜೀವಾತ್ಮ ಕೂಡಾ ನಿವಾಸಿಸುತ್ತಿದ್ದಾನೆ. ನಮ್ಮ ತಲೆಯಲ್ಲಿ ಮೆದುಳು

ಭಾಗ ದೊಡ್ಡ ನಾಡಿಕೇಂದ್ರವಾಗಿದೆ. ಏಳನೆ ಕೇಂದ್ರದಲ್ಲಿರುವ ಜೀವಿಯು ವಿಕಲಾಂಗನಾಗಿ ಇರುವುದರಿಂದ, ಜೀವಿಗೆ ಯಾವ ಶಕ್ತಿ ಇಲ್ಲದಂತೆ ಇರುವುದರಿಂದ, ಜೀವಿಯು ಬ್ರಹ್ಮನಾಡಿಯಿಂದ ಕೆಳಗೆ ಬರುವುದಾಗಲಿ, ಮೇಲಕ್ಕೆ ಹೋಗುವುದಾಗಲಿ ಮಾಡುತ್ತಿಲ್ಲ. ಜೀವಿಯು ಯಾವಕಡೆ ಕದಲದಂತೆ ಗುಣಚಕ್ರದಲ್ಲಿ ಗುಣಗಳ ಮಧ್ಯದಲ್ಲಿ ಸಿಕ್ಕಿಕೊಂಡು ಹೋಗಿದ್ದಾನೆ. ಆತ್ಮ ಕೂಡಾ ಬ್ರಹ್ಮನಾಡಿ ಏಳನೆಕೇಂದ್ರದಲ್ಲಿ ನಿವಾಸ ಮಾಡುತ್ತಾ, ತನ್ನ ಶಕ್ತಿಯನ್ನು ಶರೀರವೆಲ್ಲಾ ವ್ಯಾಪಿಸುವಂತೆ ಮಾಡಿದೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗದಲ್ಲಿ 34ನೇ ಶ್ಲೋಕದಲ್ಲಿ ಹೇಳಿದ್ದಾರೆ.

**ಶ್ಲೋ ॥ ಯಥಾ ಪ್ರಕಾಶಯ ತ್ಯೇಕಃ ಕೃತ್ಸ್ನಃ ಲೋಕಮಿಮಂ ರವಿಃ**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ! ॥**

**ಭಾವಾರ್ಥ** :– ಹೇಗೆ ಸೂರ್ಯನೊಬ್ಬನು ಈ ಲೋಕವೆಲ್ಲ ಪ್ರಕಾಶಿಸುವಂತೆ ಮಾಡುತ್ತಿದ್ದಾನೊ, ಹಾಗೇ ಆತ್ಮ ತನ್ನ ಶಕ್ತಿಯೆಲ್ಲವನ್ನು ಶರೀರವೆಲ್ಲ ವ್ಯಾಪಿಸುವಂತೆ ಮಾಡಿ ಶರೀರವೆಲ್ಲದಕ್ಕು ಚೈತನ್ಯವನ್ನು ಉಂಟುಮಾಡುತ್ತಿದ್ದಾನೆ.

ಆತ್ಮ ಶರೀರದಲ್ಲಿ ಏಳನೆ ಸ್ಥಾನವನ್ನು ಕೇಂದ್ರವಾಗಿ ಮಾಡಿಕೊಂಡು ಜೀವಿಯನ್ನು ಅಂಟಿಕೊಂಡಿದ್ದೂ, ತನ್ನ ಶಕ್ತಿಯನ್ನು ಬ್ರಹ್ಮನಾಡಿ ಮುಖಾಂತರ, ಬ್ರಹ್ಮನಾಡಿಯಲ್ಲಿನ ನಾಡಿ ಕೇಂದ್ರಗಳ ಮೂಲಕ ಶರೀರವೆಲ್ಲ ಪ್ರಸಾರಮಾಡಿ, ಶರೀರವೆಲ್ಲವನ್ನು ಕೆಲಸಮಾಡುವಂತೆ ಮಾಡುತ್ತಿದೆ. ಆತ್ಮಶಕ್ತಿ ಏಳು ಕೇಂದ್ರಗಳ ಮುಖಾಂತರ ಶರೀರವೆಲ್ಲಾ ಹರಡುತ್ತಿರುವುದರಿಂದ, ಮಾನವ ಶರೀರವನ್ನು ಏಳೆಗಳ ಆಲದ ಮರವೆಂದು ಒಗಟಿನಲ್ಲಿ ಹೇಳಿದ್ದಾರೆ. ಆತ್ಮವಾಗಲಿ, ಜೀವಾತ್ಮ ವಾಗಲಿ ಏಳನೆ ಸ್ಥಾನದಲ್ಲಿಯೇ ಇರುತ್ತಾ, ಕೆಳಗೆ ಬರುವುದಾಗಲಿ, ಮೇಲಕ್ಕೆ ಹೋಗುವುದಾಗಲಿ, ಮಾಡುತ್ತಿಲ್ಲ. ಆದ್ದರಿಂದ ಆಲದಮರವನ್ನು ಹತ್ತಬಾರದು ಇಳಿಯಬಾರದು ಎಂದು ಒಗಟಿನಲ್ಲಿ ಹೇಳಿದ್ದಾರೆ. ಈ ಒಗಟಿನ ಪ್ರಶ್ನೆಗೆ ಉತ್ತರ ದೊರೆತರೆ ಆತ್ಮ ಒಂದುಕಡೆಯಿದ್ದು ಶರೀರವೆಲ್ಲಾ ತನ್ನ ಶಕ್ತಿಯನ್ನು ಪ್ರಸಾರ ಮಾಡುತ್ತಿದೆಯೆಂದು. ಆತ್ಮ ಬ್ರಹ್ಮನಾಡಿಯಲ್ಲಿ ಮೇಲಕ್ಕೆ ಹೋಗುವುದಾಗಲಿ, ಕೆಳಗೆ ಇಳಿಯುವುದಾಗಲಿ ಮಾಡುವುದಿಲ್ಲವೆಂದು ತಿಳಿದುಹೋಗುತ್ತಿದೆ. ಈ

ವಿಧವಾಗಿ ಚಿಕ್ಕ ವಾಕ್ಯಗಳ ಒಗಟಿನಲ್ಲಿ ದೊಡ್ಡ ಜ್ಞಾನವನ್ನು ಹುಡುಕುವಂತೆ, ನಮ್ಮ ಪೂರ್ವಿಕರಾದ ಜ್ಞಾನಿಗಳು ಒಗಟುಗಳನ್ನು ಸೃಷ್ಠಿಸಿದ್ದಾರೆ.

**ಮೊದಲು ದೇಹಿ ಭಕ್ತಿ ಇರಬೇಕು. ನಂತರ ದೇಶಭಕ್ತಿ ಇರಬೇಕು. ದೇಹಿ ಭಕ್ತಿ ಇಲ್ಲದೆ ದೇಶಭಕ್ತಿ ಎನ್ನುವವನು ತಲೆಯಿಲ್ಲದ ಮುಂಢದಂಥವನು.**

## 14. ಒಂದು ಪೆಟ್ಟಿಗೆಯಲ್ಲಿ ಇಬ್ಬರು ಕಳ್ಳರು, ಯಾರು ಅವರು?

ಆಧ್ಯಾತ್ಮಿಕ ಜ್ಞಾನದ ಪ್ರಕಾರ ಹುತ್ತಾ ಎಂದರೂ, ಪೆಟ್ಟಿಗೆ ಎಂದರೂ ನಾವು ನಿವಾಸಿಸುವ ಶರೀರವೇಯೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಈ ಒಗಟಿನಲ್ಲಿ ಪೆಟ್ಟಿಗೆಯಲ್ಲಿ ಇಬ್ಬರು ಕಳ್ಳರು ಎಂದು ಹೇಳಿದ್ದಾರೆ. ಕಳ್ಳರು ಯಾವಾಗಲೂ ಕಾಣಿಸದಂತೆ, ಯಾರಿಗೂ ತಿಳಿಯದಂತೆ, ತಮ್ಮ ವೃತ್ತಿಯಾದ ಕಳ್ಳತನವನ್ನು ಮಾಡುತ್ತಿರುತ್ತಾರೆ. ಅವರು ದೊರೆತರೂ ಕಳ್ಳರೇ, ದೊರೆಯದಿದ್ದರೂ ಕಳ್ಳರೇ. ಈಗ ಪೆಟ್ಟಿಗೆ ಎಂದು ಹೇಳಿದ್ದಾರೆ ಅಲ್ಲವೇ! ಪೆಟ್ಟಿಗೆಯಲ್ಲಿ ಧನವಿರುತ್ತದೆ, ಆದರೆ ಕಳ್ಳರೇತಕ್ಕಿರುತ್ತಾರೆಂದು ಪ್ರಶ್ನೆ ಬರಬಹುದು. ನಾವೆಲ್ಲ ಸಕ್ರಮವಾಗಿ ಹೇಳಿದರೇ ನೀವು ಹುಡುಕಬೇಕಾದ ಕೆಲಸವಿಲ್ಲವಲ್ಲ! ಆದ್ದರಿಂದ ನಾವು ದಾರಿ ತಪ್ಪಿಸಿ ಹೇಳಿ, ನಿಮ್ಮನ್ನು ಶೋಧಿಸುವಂತೆ ಮಾಡುತ್ತಿದ್ದೇವೆಂದು ಕಥೆಯನ್ನು ಹೇಳಿದವರನ್ನುತ್ತಿದ್ದಾರೆ. ಈಗ ನಾವು ಇಬ್ಬರು ಕಳ್ಳರ ವಿಷಯವನ್ನು ಗಮನಿಸೋಣ. ಕಳಿಂಗ ದೇಶದಲ್ಲಿ ದೇಶವೆಲ್ಲದಕ್ಕು 'ತಿಳಿದವನು' ಎನ್ನುವ ಹೆಸರಿರುವ ದೊಡ್ಡ ಕಳ್ಳ ಇದ್ದನು. ಆ ದೇಶದ ರಾಜ, ಮಂತ್ರಿ, ಸೈನಿಕರು ಎಷ್ಟೋ ಶ್ರಮದಿಂದ ಆ ಕಳ್ಳನನ್ನು ಬಂಧಿಸಬೇಕೆಂದು ಪ್ರಯತ್ನ ಮಾಡಿದ್ದಾರೆ. ಆದರೆ ಆ ಕಳ್ಳ ಯಾರೊ, ಹೇಗಿರುತ್ತಾನೊ ಯಾರಿಗೂ ತಿಳಿಯಲಿಲ್ಲ. ಕಳ್ಳನ ಹೆಸರೇ "ತಿಳಿದವನು". ತಿಳಿದವನು ಎನ್ನುವ ಕಳ್ಳ ದೇಶವೆಲ್ಲದಕ್ಕು ಒಬ್ಬನೇ ಇದ್ದರೂ, ಆ ಒಬ್ಬನನ್ನು ಯಾರೂ ಹಿಡಿದುಕೊಳ್ಳದೆ ಹೋಗಿದ್ದಾರೆ. ಅಷ್ಟರಲ್ಲಿಯೇ, 'ತಿಳಿದವನು' ಅಲ್ಲದೆ ಮತ್ತೆ ಇಬ್ಬರು ಕಳ್ಳರು ಆ ದೇಶದಲ್ಲಿ ಕಳ್ಳತನ ಮಾಡುವಂತೆ ಕಳಿಂಗ ರಾಜನಿಗು, ಪ್ರಜೆಗಳಿಗು ತಿಳಿದಿದೆ. ಕೊನೆಗೆ ಆ ದೇಶ ಗೂಢಚಾರರು, 'ತಿಳಿದವನು' ಎನ್ನುವ ಮಹಾಕಳ್ಳನ ಕುಮಾರರಾದ ಸಿಗನು, ದೊರೆಯನು ಎನ್ನುವವರು ಹೊಸದಾಗಿ

ದೇಶದಲ್ಲಿ ಕಳ್ಳತನವನ್ನು ಮಾಡುವಂತೆ ತಿಳಿದುಕೊಂಡಿದ್ದಾರೆ. ಸಿಗನು, ದೊರೆಯನು ಎನ್ನುವವರು ಇಬ್ಬರೂ, ತಿಳಿದವನು ಎನ್ನುವ ಮಹಾಕಳ್ಳನ ಕುಮಾರರೆನ್ನುವುದು ವಾಸ್ತವವೇ. ತಿಳಿದವನು ಎನ್ನುವ ಕಳ್ಳ ತನ್ನ ಕುಮಾರರಿಗೆ ಕಳ್ಳತನ ವೃತ್ತಿಯನ್ನು ಒಪ್ಪಿಸಿ, ತಾನು ವಿಶ್ರಾಂತಿ ತೆಗೆದುಕೊಂಡಿದ್ದಾನೆ.

ಸಿಗನು, ದೊರೆಯನು ಇಬ್ಬರು ಅವಳಿಜವಳಿ ಮಕ್ಕಳಾದ್ದರಿಂದ ಇಬ್ಬರೂ ಒಂದೇ ಹೋಲಿಕೆಯಿಂದ ಇರುತ್ತಾರೆ. ಅಣ್ಣನಾದ 'ಸಿಗನು' ಬಹಳ ತಿಳುವಳಿಕೆಯುಳ್ಳವನಾದ್ದರಿಂದ, 'ದೊರೆಯನು' ಎನ್ನುವವನು ಸ್ವಲ್ಪ ತಿಳುವಳಿಕೆ ಇಲ್ಲದವನಾದರೂ, ತಾನೇ ತನ್ನ ಅಣ್ಣನಿಗಿಂತ ತಿಳುವಳಿಕೆ ಇರುವವನೆಂದು ಅಂದುಕೊಳ್ಳುತ್ತಿದ್ದನು. ಕಳಿಂಗ ರಾಜ್ಯದಲ್ಲಿನ ಇಬ್ಬರು ಕಳ್ಳರನ್ನಾಗಲಿ, ಅವರಲ್ಲಿ ಒಬ್ಬ ಕಳ್ಳನನ್ನಾಗಲಿ ಹಿಡಿದುಕೊಂಡು ಬರಬೇಕೆಂದು ತನ್ನ ಸೈನ್ಯಕ್ಕೆ ರಾಜನು ಆಜ್ಞಾಪಿಸಿದ್ದಾನೆ. ರಾಜನ ಆಜ್ಞೆ ಪ್ರಕಾರ ಆ ದೇಶದ ಸೈನಿಕರೆಲ್ಲರೂ ದೇಶವೆಲ್ಲ ಜಾಲಾಡಿಸುತ್ತಿದ್ದರು. ಆದರೇ, ಸಿಗನು ತನ್ನ ತಿಳುವಳಿಕೆಯನ್ನು ಉಪಯೋಗಿಸಿ, ತನ್ನ ತಮ್ಮನಾದ 'ದೊರೆಯನು' ನನ್ನು ತೆಗೆದುಕೊಂಡು, ನೇರವಾಗಿ ರಾಜನ ಮನೆಗೆ ಹೋಗಿ ತಾವು ಒಬ್ಬರು ಜ್ಯೋತಿಷ್ಯರೆಂದು, ಒಬ್ಬರು ವೈದ್ಯರೆಂದು ಪರಿಚಯ ಮಾಡಿಕೊಂಡಿದ್ದಾರೆ. ಆಗ ರಾಜ ಅವರ ಅವಶ್ಯಕತೆ ನಮಗಿದೆಯೆಂದು ಅವರಿಬ್ಬರನ್ನು ತಮ್ಮ ಹತ್ತಿರವೇ ಇರುವಂತೆ ಹೇಳಿ, ತನ್ನ ಮಗಳಿಗೆ ಒಬ್ಬರು ಚಿಕಿತ್ಸೆ ಮಾಡಿರೆಂದು ಸಿಗನಿಗೆ ಹೇಳಿ, ತಮಗೆ ಆಗಾಗ ಒಳ್ಳೆಯದಿನಗಳನ್ನು ಕುರಿತು ಹೇಳುವುದಕ್ಕೆ ದೊರೆಯನನ್ನು ನೇಮಿಸಿಕೊಂಡಿದ್ದಾನೆ. ಈ ವಿಧವಾಗಿ ಸಿಗನು ಮಿಡಿಭಟ್ಟ ಎಂಬ ಹೆಸರಿನಿಂದ, ದೊರೆಯನು ಚುಕ್ಕೆಭಟ್ಟ ಎನ್ನುವ ಹೆಸರಿನಿಂದ ಅಂತಃಪುರದಲ್ಲಿಯೇ ನಿಂತುಹೋಗಿದ್ದಾರೆ. ದೇಶ ರಾಜಧಾನಿಯಾದ ಕಳಿಂಗ ಪಟ್ಟಣದಲ್ಲಿ ಸಿಗನು, ದೊರೆಯನು ಎನ್ನುವ ಇಬ್ಬರು ಕಳ್ಳರು ಬದಲಿ ಹೆಸರುಗಳು ಹೊಂದಿರುವಾಗ, ಕಳಿಂಗ ರಾಜ್ಯದ ಸೈನಿಕರು, ಇಬ್ಬರು ಕಳ್ಳರಿಗಾಗಿ ದೇಶವೆಲ್ಲ ಹುಡುಕುತ್ತಿದ್ದರು.

ಈ ವಿಧವಾಗಿ ಎಷ್ಟುಕಾಲ ಇಬ್ಬರು ಕಳ್ಳರನ್ನು ಹುಡುಕಿದರೂ, ಎಲ್ಲಿಯೂ ಅವರು ಸಿಗಲಿಲ್ಲ. ಕಳ್ಳರ ವಿಷಯದಲ್ಲಿ ರಾಜನಿಗೆ ಹೆಚ್ಚಾಗಿ ಛಲ ಬೆಳೆದಿದೆ.

ಹೇಗಾದರೂ ಅವರನ್ನು ಹಿಡಿದುಕೊಳ್ಳಬೇಕೆಂದುಕೊಂಡಿದ್ದಾನೆ. ಕೊನೆಗೆ ರಾಜನು ಒಂದು ಪ್ರಕಟಣೆ ಮಾಡಿದ್ದಾನೆ. ಯಾರಾದರೂ ಕಳ್ಳರಲ್ಲಿ ಒಬ್ಬರನ್ನು ಹಿಡಿದುಕೊಟ್ಟರೆ ತನ್ನ ರಾಜ್ಯದಲ್ಲಿ ಅರ್ಧರಾಜ್ಯ ಆತನಿಗೆ ಕೊಟ್ಟು, ತನ್ನ ಇಬ್ಬರು ಹೆಣ್ಣು ಮಕ್ಕಳಲ್ಲಿ ಒಬ್ಬರನ್ನು ಆತನಿಗೆ ಕೊಟ್ಟು ವಿವಾಹ ಮಾಡುತ್ತೇನೆಂದು ಒಂದುವೇಳೆ, ಇಬ್ಬರನ್ನು ಹಿಡಿದುಕೊಟ್ಟರೆ, ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಕೊಟ್ಟು ವಿವಾಹ ಮಾಡಿ, ತನ್ನ ರಾಜ್ಯವೆಲ್ಲವನ್ನು ಆತನಿಗೇ ಕೊಡುತ್ತೇನೆಂದು ಪ್ರಕಟಿಸಿದ್ದಾನೆ. ಆ ಪ್ರಕಟಣೆಯನ್ನು ಕೇಳಿದ ಕಳಿಂಗ ದೇಶದಲ್ಲಿನ ಪ್ರಜೆಗಳು, ಇತರೆ ದೇಶಗಳ ಯುವರಾಜರು, ಎಲ್ಲರೂ ಕಳ್ಳರನ್ನು ಹಿಡಿದುಕೊಳ್ಳಬೇಕೆಂದು ಪ್ರಯತ್ನಗಳ ಮೇಲೆ ಪ್ರಯುತ್ನಗಳು ಮಾಡಿದ್ದಾರೆ. ಆದರೂ ಅವರು ಸಾಮಾನ್ಯ ಕಳ್ಳರಾ ದೊರೆಯುವುದಕ್ಕೆ! ಒಬ್ಬನು ಸಿಗನು ಮತ್ತೊಬ್ಬನು ದೊರೆಯನು. ಇಬ್ಬರೂ ಹೆಸರುಗಳು ಬದಲಿಸಿಕೊಂಡು ನೇರವಾಗಿ ರಾಜರ ಮನೆಯಲ್ಲಿಯೇ ಝಂಡಾ ಹೂಡಿದ್ದಾರೆ. ಕಳ್ಳರು ಸಿಗಲಿಲ್ಲವೆಂದು ರಾಜ ತನ್ನ ಹತ್ತಿರವಿರುವ ಮಿಡಿಭಟ್ಟ, ಚುಕ್ಕೆಭಟ್ಟನ್ನು ಕರೆದು ಕಳ್ಳರ ವಿಷಯವೆಲ್ಲಾ ಹೇಳಿ, ತನ್ನ ಪ್ರಕಟಣೆಯನ್ನು ಕೂಡಾ ಹೇಳಿದ್ದಾನೆ. ಅದೆಲ್ಲ ಕೇಳಿದ ಅವರು, ಆ ಇಬ್ಬರು ಕಳ್ಳರನ್ನು ನಾವು ಹಿಡಿದುಕೊಟ್ಟರೆ ಪ್ರಕಟಣೆ ಪ್ರಕಾರ ಪಾರಿತೋಷಕವಾಗಿ ರಾಜ್ಯವನ್ನು ಕೊಡುತ್ತೀರಾ ಎಂದು ಕೇಳಿದರು. ಆಗ ರಾಜನು ನನಗೆ ವಯಸ್ಸು ಮುಗಿದುಹೋಗುತ್ತಿದೆ. ನನಗೆ ಕುಮಾರರು ಇಲ್ಲ. ನೀವು ಕಳ್ಳರನ್ನು ಹಿಡಿದುಕೊಂಡರೆ ನನ್ನ ಮಾತನ್ನು ತಪ್ಪದೇ ನೆರವೇರಿಸಿಕೊಳ್ಳುತ್ತೇನೆ. ನಾನು ಆಡಿದ ಮಾತನ್ನು ತಪ್ಪುವುದಿಲ್ಲ ಎಂದಿದ್ದಾನೆ. ಆಗ ಮಿಡಿಭಟ್ಟ (ಸಿಗನು) ಹೀಗೆ ಕೇಳಿದ್ದಾನೆ. "ಒಂದುವೇಳೆ ಕಳ್ಳರೇ ರಾಜ್ಯಕ್ಕಾಗಿ ಬಂದು, ಅವರೇ ಶರಣಾಗತರಾದರೆ ಅವರನ್ನು ಅವರೇ ಹಿಡಿದುಕೊಟ್ಟಂತಾಗುತ್ತದೆ ಅಲ್ಲವೆ! ಆಗ ನೀವು ಏನು ಮಾಡುತ್ತೀರಾ" ಎಂದನು. ಅದಕ್ಕೆ ರಾಜನು, "ಇಷ್ಟುಕಾಲ ನಮಗಾಗಲಿ, ಇತರರಿಗಾಗಲಿ ಸಿಗದಂತೆ ಇಲ್ಲಸಲ್ಲದ ಕಷ್ಟಗಳು ಕೊಟ್ಟ ಆ ಕಳ್ಳರು ಎಷ್ಟೋ ತಿಳುವಳಿಕೆಯುಳ್ಳವರು. ಅಂತಹ ತಿಳುವಳಿಕೆಯುಳ್ಳವರು ನನ್ನ ರಾಜ್ಯವನ್ನು ಬುದ್ಧಿವಂತಿಕೆಯಿಂದ ಪಾಲಿಸುತ್ತಾರೆ. ಹಾಗಿರುವಾಗ ಅವರಿಗೇ ಈ ರಾಜ್ಯವನ್ನು ಕೊಡುತ್ತೇನೆ. ನನ್ನ ಪ್ರಜೆಗಳನ್ನು ಸಕ್ರಮವಾಗಿ ಪಾಲಿಸುವವರು ದೊರೆಯುವುದೇ ನನಗೆ ಮುಖ್ಯ. ಕಳ್ಳರು

ತಿಳುವಳಿಕೆಯುಳ್ಳವರು ಆದ್ದರಿಂದ ಅವರನ್ನು ಹಿಡಿದುಕೊಳ್ಳುವವರು ಕೂಡಾ ತಿಳುವಳಿಕೆಯುಳ್ಳವರೇ ಇರುತ್ತಾರೆನ್ನುವ ಉದ್ದೇಶದಿಂದಲೇ ನಾನು ಆ ಪ್ರಕಟಣೆಯನ್ನು ಹೊರಡಿಸಿದ್ದೇನೆ. ಒಂದುವೇಳೆ ಕಳ್ಳರೇ ಶರಣಾದರೆ ಅವರೇ ತಿಳುವಳಿಕೆಯುಳ್ಳವರು, ಆದ್ದರಿಂದ ಅವರಿಗೆ ನನ್ನ ರಾಜ್ಯವನ್ನು, ನನ್ನ ಮಕ್ಕಳನ್ನು ಕೊಡುತ್ತೇನೆ. ಅವರು ಧನವಿಲ್ಲದಿರುವುದರಿಂದ ಅವರು ಕಳ್ಳರಾಗಿದ್ದಾರೆ. ಧನ ಇರುವವರಾದರೆ, ಅವರೇ ನಿಜವಾದ ರಾಜರಾಗಿರುತ್ತಾರೆ. ನನಗೆ ಬೇಕಾಗಿರುವುದು ತಿಳುವಳಿಕೆಯುಳ್ಳವರು. ಅವರು ಯಾರಾದರೂ ಫರವಾಗಿಲ್ಲ," ಎಂದು ಹೇಳಿದ್ದಾನೆ.

ಆಗ ಚುಕ್ಕೆಭಟ್ಟ (ದೊರೆಯನು) ಹೀಗಂದಿದ್ದಾನೆ. "ನಾನು ನನ್ನ ಅಣ್ಣ ಇಬ್ಬರು, ತಿಳುವಳಿಕೆಯಿಂದ ತಪ್ಪಿಸಿಕೊಂಡ ಕಳ್ಳರನ್ನು ಹಿಡಿದುಕೊಂಡು ನಾವು ಕೂಡಾ ತಿಳುವಳಿಕೆಯುಳ್ಳವರೆಂದು ನಿರೂಪಿಸಿಕೊಳ್ಳುತ್ತೇವೆ." ಎಂದು ಹೇಳಿದ್ದಾನೆ. ಮಿಡಿಭಟ್ಟ (ಸಿಗನು), ತಮ್ಮನ ಮಾತುಗಳನ್ನು ಸಮರ್ಥಿಸಿ ನಾಳೆಯೇ ನಮ್ಮ ಪ್ರಯತ್ನವನ್ನು ಪ್ರಾರಂಭಮಾಡುತ್ತೇವೆಂದು ಹೇಳಿದ್ದಾರೆ. ರಾಜನು ಅವರ ಮಾತುಗಳಿಗೆ ಸಂತೋಷಿಸಿದ್ದಾನೆ ಗತದಲ್ಲಿ ರಾಜಮಂದಿರದಲ್ಲಿಯೇ ಕಳ್ಳತನ ಮಾಡುತ್ತೇವೆಂದು ಸಿಗನು, ದೊರೆಯನು ಪ್ರಕಟಿಸಿದ್ದರು. ಮುಖ್ಯವಾಗಿ ಆ ಕೆಲಸವನ್ನು ಮಾಡುವುದಕ್ಕೇ ಇಬ್ಬರು ಕಳ್ಳರು ರಾಜ ಮಂದಿರದಲ್ಲಿಯೇ ನಿವಾಸ ಏರ್ಪಡಿಸಿಕೊಂಡಿದ್ದಾರೆ. ಮೊದಲು ಮಾಡಿದ ತಮ್ಮ ಪ್ರಕಟಣೆಯನ್ನು ನೆರವೇರಿಸಿಕೊಳ್ಳಬೇಕೆಂದುಕೊಂಡ ಸಿಗನು, ದೊರೆಯನು ರಾಜನೊಂದಿಗೆ ಕಳ್ಳರನ್ನು ಹಿಡಿದುಕೊಳ್ಳುತ್ತೇವೆಂದು ಹೇಳಿದ ಮರುದಿನವೇ, ರಾಜಮಂದಿರದಲ್ಲಿ, ರಾಜ ಕುಟುಂಬದಲ್ಲಿನ ಪೂರ್ವದ ಆಭರಣವೆಲ್ಲ ದರೋಡೆಮಾಡಿ, ಗತದಲ್ಲಿ ನಾವು ಹೇಳಿದಂತೆ ರಾಜಮಂದಿರವನ್ನು ದೋಚಿಕೊಂಡಿದ್ದೇವೆ ಎಂದು ಒಂದು ಕಾಗದದ ಮೇಲೆ ಬರೆದು, ಅಲ್ಲಿಟ್ಟು ಹೋಗುವುದು ನಡೆದಿದೆ. ಬೆಳಗಾದ ನಂತರ ದರೋಡೆ ನಡೆದ ವಿಷಯ, ಕಳ್ಳರು ಕಾಗದದ ಮೇಲೆ ಬರೆದುಹೋದ ವಿಷಯವೂ ರಾಜನಿಗೆ ತಿಳಿದಿದೆ. ಎಷ್ಟೋಜನ ಆಯುಧಗಳನ್ನೊಳಗೊಂಡ (ಸಾಯುಧರಾದ) ಸೈನಿಕರು ಕಾವಲು ಕಾಯುತ್ತಿರುವಾಗ, ಇಬ್ಬರು ಕಳ್ಳರು

ವರ್ಷದ ಮುಂಚೆಯೇ ಹೇಳಿ ಮಾಡುವುದು ರಾಜನಿಗೆ ಆಶ್ಚರ್ಯವಾಗಿದೆ. ತಮ್ಮ ಆಭರಣಗಳು ಹೋಗಿವೆ ಎಂದುಕೊಳ್ಳದೆ, ಕಳ್ಳರು ಬಹಳ ತಿಳುವಳಿಕೆಯುಳ್ಳ ವರೆಂದು ರಾಜ ಅವರನ್ನೇ ಹೊಗಳುತ್ತಿದ್ದನು. ರಾಜನೊಂದಿಗೆ ಕೂಡಿ ರಾತ್ರಿ ಹೊತ್ತು ಹೋಗುವವರೆಗು ಜೂಜನ್ನಾಡಿದ ಮಿಡಿಭಟ್ಟ, ಚುಕ್ಕೆಭಟ್ಟ ಇಬ್ಬರು ರಾಜರ ಹತ್ತಿರಕ್ಕೆ ಬಂದು, ಕಳ್ಳತನ ನಡೆದಿದೆಯಂತಲ್ಲಾ, ಎಂದು ಏನು ತಿಳಿಯದವರಂತೆ ಕೇಳಿದ್ದಾರೆ. ರಾತ್ರಿ ಎರಡು ಗಂಟೆಗಳವರೆಗು ನಾವು ಎಚ್ಚರವಾಗಿಯೇ ಇದ್ದೇವೆ. ನಮಗೆ ತಿಳಿಯದಂತೆ, ನಾವು ಇರುವಕೋಣೆಗೆ ಪಕ್ಕದಕೋಣೆಯಲ್ಲಿಯೇ ದರೋಡೆ ಮಾಡುವುದು ವಿಚಿತ್ರವೆಂದು ರಾಜನು ಹೇಳಿದ್ದಾನೆ.

ನಾವು ಈ ದಿನದಿಂದ ಕಳ್ಳರಿಗಾಗಿ ಪ್ರಯತ್ನ ಮಾಡುತ್ತೇವೆಂದು ನಿನ್ನೇಯೇ ಹೇಳಿದ್ದೇವೆ ಅಲ್ಲವೆ! ಎಂದು ಮಿಡಿಭಟ್ಟ ರಾಜನೊಂದಿಗೆ ಹೇಳಿ, ಇಬ್ಬರು ಅಣ್ಣತಮ್ಮಂದಿರು ಹೊರಟುಹೋಗಿದ್ದಾರೆ. ಎರಡು ದಿನಗಳ ನಂತರ ರಾಜನಿಗೆ "ನಾವು ಇಬ್ಬರು ಕಳ್ಳರನ್ನು ಒಂದು ಪೆಟ್ಟಿಗೆಯಲ್ಲಿ ಬಂಧಿಸಿದ್ದೇವೆ, ಪ್ರಜೆಗಳ ಸಮಕ್ಷಮದಲ್ಲಿ ರಾಜಸಭೆಯಲ್ಲಿ ಅವರನ್ನು ಎಲ್ಲರಿಗೂ ತೋರಿಸುತ್ತೇವೆ, ನಾಳೆಯೇ ಅಲ್ಲಿಗೆ ಬರುತ್ತಿದ್ದೇವೆ" ಎಂದು ಇಬ್ಬರು ಅಣ್ಣತಮ್ಮಂದಿರು, ಒಬ್ಬ ಮನುಷ್ಯನೊಂದಿಗೆ ವಾರ್ತೆಯನ್ನು ಕಳಿಸಿದ್ದಾರೆ. ರಾಜನಿಗೆ ಆ ಮಾತನ್ನು ಕೇಳಿದ ನಂತರ ಬಹಳ ಆಶ್ಚರ್ಯವಾಗಿದೆ. ಇಷ್ಟುಕಾಲ ಎಷ್ಟೋ ಪ್ರಯತ್ನ ಮಾಡಿದರು, ತಮಗೆ ಯಾವುದೇ ಸುಳಿವು ತಿಳಿಯದ ಕಳ್ಳರು, ಮಿಡಿಭಟ್ಟಗೆ (ಸಿಗನು), ಚುಕ್ಕೆಭಟ್ಟಗೆ (ದೊರೆಯನು) ಸಿಕ್ಕಿರುವುದು ವಿಚಿತ್ರವಾಗಿ, ಆಶ್ಚರ್ಯವಾಗಿ ತೋಚಿದೆ. ಸುಮಾರು ಆರು ತಿಂಗಳ ಕಾಲ ತಮ್ಮ ಹತ್ತಿರ ಇರುವವರು ಕಳ್ಳರಿಗಿಂತ ಮೀರಿದ ತಿಳುವಳಿಕೆಯುಳ್ಳವರೆಂದು ತಾನು ಗ್ರಹಿಸದಿರುವುದಕ್ಕೆ, ರಾಜ ತಾನು ತಿಳುವಳಿಕೆ ಇಲ್ಲದವನೆಂದುಕೊಂಡಿದ್ದಾನೆ. ಎರಡನೆದಿನ ಮಿಡಿಭಟ್ಟ, ಚುಕ್ಕೆಭಟ್ಟ ಎತ್ತರವಾದ ದೊಡ್ಡ ಪೆಟ್ಟಿಗೆಯನ್ನು, ಒಂದು ಗಾಡಿಯಲ್ಲಿ ತೆಗೆದುಕೊಂಡು ಬಂದು ರಾಜರ ಸಭೆಯಲ್ಲಿ ಇಳಿಸಿದ್ದಾರೆ. ಕಳ್ಳರನ್ನು ಹಿಡಿದು ತಂದಿದ್ದಾರೆಂದು ತಿಳಿದಾಗ, ಕಳ್ಳರನ್ನು ನೋಡಬೇಕೆನ್ನುವ ಕೋರಿಕೆಯಿಂದ ಬಹಳಜನ ಅಲ್ಲಿಗೆ

ಬಂದಿದ್ದಾರೆ. ಆಗ ರಾಜನ ಸಮಕ್ಷಮದಲ್ಲಿ ಇಬ್ಬರು ಅಣ್ಣತಮ್ಮಂದಿರು ಹೀಗೆ ಹೇಳಿದ್ದಾರೆ." ಇಷ್ಟುಕಾಲ ನಿಮಗೆ ಸಿಗದಂತೆ ಇಲ್ಲಸಲ್ಲದ ಕಷ್ಟಗಳನ್ನು ಕೊಟ್ಟ ಕಳ್ಳರನ್ನು ನಾವು ಹಿಡಿದುಕೊಂಡಿದ್ದೇವೆ. ಒಂದು ವರ್ಷದ ಕೆಳಗೇ ರಾಜ ಮಂದಿರದಲ್ಲಿ ದರೋಡೆ ಮಾಡುತ್ತೇವೆಂದು ಹೇಳಿ, ಮೂರು ದಿನಗಳ ಕೆಳಗೆ ದರೋಡೆ ಮಾಡಿದ್ದಾರೆ. ನಾವು ಯಾರಿಗೂ ಸಿಗುವುದಿಲ್ಲವೆಂದು ಹೇಳಿ ದೊರಕದ ಇವರ ಅಸಲು ಹೆಸರುಗಳು ಸಿಗನು, ದೊರೆಯನು ಸ್ವತಃವಾಗಿ ರಾಜನೇ ಇವರ ಮೇಧಸ್ಸಿಗೆ ಮೆಚ್ಚಿಕೊಂಡಿದ್ದಾನೆ. ಅಂತಹ ಕಳ್ಳರ ಹಿರಿಮೆಯನ್ನು ಗುರುತಿಸಿ ರಾಜನು ಕಳ್ಳರನ್ನು ಸಹಿತವು ಗೌರವದಿಂದ ಹೇಳುವ ಸ್ವಭಾವ ಇರುವ ವರಾದ್ದರಿಂದ, ಇನ್ನು ರಾಜನ ರಾಜ್ಯದಲ್ಲಿ ಕಳ್ಳತನ ಮಾಡಬಾರದೆಂದು ಕೊಂಡಿದ್ದಾರೆ. ಅಂತಹ ಸಮಯದಲ್ಲಿ ನಮಗೆ ದೊರೆತಿದ್ದಾರೆ. ಇವರನ್ನು ನಿಮಗೆ ತೋರಿಸಿದ ನಂತರ ರಾಜಮಂದಿರದಲ್ಲಿ ಹೇಗೆ ದರೋಡೆ ಮಾಡಿರುವುದು ಹೇಳಬಲ್ಲರು. ಈಗ ಬಾಗಿಲು ತೆಗೆದುಕೊಂಡು ಹೊರಗೆ ಬರುತ್ತಾರೆ ನೋಡಿರಿ.

ಈ ವಿಧವಾಗಿ ಹೇಳಿದ ಇಬ್ಬರೂ ಎತ್ತರದ ಪೆಟ್ಟಿಗೆ ಹಿಂದಕ್ಕೆ ಹೋಗಿ ಆಕಡೆ ಇರುವ ಬಾಗಿಲುಗಳು ತೆರೆದು, ಪೆಟ್ಟಿಗೆಯೊಳಗೆ ಹೋಗಿ, ಮುಂದುಗಡೆ ಬಾಗಿಲುಗಳು ತೆರೆದುಕೊಂಡು ಹೊರಗೆ ಬಂದಿದ್ದಾರೆ. ಎಲ್ಲರೂ ಮುಂದಿನ ಬಾಗಿಲಕಡೆ ನೋಡುತ್ತಿರುವಾಗ ಮಿಡಿಭಟ್ಟ, ಚುಕ್ಕೆಭಟ್ಟ ಹೊರಗೆ ಬರುವುದು ನೋಡಿ ಇದೇನು ನೀವು ಬಂದಿದ್ದೀರ. ಒಳಗೆ ಕಳ್ಳರು ಏನಾಗಿದ್ದಾರೆ ಎಂದುಕೊಳ್ಳುವುದನ್ನು ನೋಡಿದ ಸಿಗನು, ದೊರೆಯನು "ನೋಡಿದ್ದೀರ! ನಿಮಗೆ ತಿಳಿದಿದೆ ನಾವು ಮಿಡಿಭಟ್ಟ, ಚುಕ್ಕೆಭಟ್ಟ ಎಂದು. ಆದರೆ ನಿಮಗೆ ತಿಳಿದಿಲ್ಲ ನಾವು ಇಬ್ಬರೂ ಕಳ್ಳರೆಂದು, ಎರಡು ನಿಮಿಷಗಳ ಹಿಂದೆ ಕೂಡಾ ನಿಮ್ಮನ್ನು ಮೋಸಮಾಡಿ, ಕಳ್ಳರನ್ನು ಹಿಡಿದುಕೊಂಡಿದ್ದೇವೆಂದು ಹೇಳಿದ್ದೇವೆ, ನೀವು ನಂಬಿದ್ದೀರ. ನಮ್ಮ ತಂದೆಯ ಹೆಸರು 'ತಿಳಿದವನು', ನಮ್ಮ ಇಬ್ಬರ ಹೆಸರು ಸಿಗನು, ದೊರೆಯನು. ರಾಜನ ಒಳ್ಳೆಯತನವೇ ನಮ್ಮನ್ನು ಬದಲಾಯಿಸಿ, ನಾವು ತಿಳಿಯಲ್ಪಡುವಂತೆ ಮಾಡಿದೆ. ರಾಜನು ನಮಗೆ ವಿರುದ್ಧವಾಗಿ ಮಾತನಾಡಿದ್ದರೆ ನಾವು ನಿಮ್ಮ ಮುಂದಕ್ಕೆ ಬರುವವರಲ್ಲ. ನಾವು ಅಂದುಕೊಂಡರೆ

ನಿಮ್ಮ ಮುಂದೆಯೇ ಕಾಣಿಸದಂತೆ ಹೋಗಬಲ್ಲೆವು. ನೀವು ನಮ್ಮನ್ನು ಒಳ್ಳೆಯ ರೀತಿಯಲ್ಲಿ ಆದರಿಸಿ ಅಭಿಮಾನವಾಗಿ ನೋಡದೆಹೋದರೆ, ಪುನಃ ಈ ಪೆಟ್ಟಿಗೆಯೊಳಗೆ ಹೋಗಿ ಕಾಣಿಸುವುದಿಲ್ಲ. ಏನನ್ನುತ್ತೀರ ಹೇಳಿರಿ", ಎಂದು ಅವರು ಕೇಳಿದಾಗ ಅಲ್ಲಿರುವವರೆಲ್ಲರೂ, ಅವರನ್ನು ಕಳ್ಳರಾಗಿ ನೋಡದೆ, ನೀವು ನಮಗೆ ಮಿಡಿಭಟ್ಟ, ಚುಕ್ಕೆಭಟ್ಟರೇ ಹೊರತು ಕಳ್ಳರು ಅಲ್ಲವೆಂದು ಜೋರಾಗಿ ಕಿರುಚಿದರು. ರಾಜನು ಕೂಡಾ ಮಿಡಿಭಟ್ಟರೆಂದು ಹೆಸರಿಟ್ಟು ಕರೆಯುತ್ತಾ ಬಂದು ಅವರನ್ನು ಗೌರವಾಗಿ ಮಾತನಾಡಿಸಿದನು. ಅಂದಿನಿಂದ ಅವರಿಗೆ ಮಿಡಿಭಟ್ಟ, ಚುಕ್ಕೆಭಟ್ಟ ಎನ್ನುವ ಹೆಸರುಗಳು ಹೋಗಿ, ಎಲ್ಲರೂ ಅವರನ್ನು ಪೆಟ್ಟಿಗೆಯಲ್ಲಿನ ಕಳ್ಳರೆಂದು ಮುದ್ದಾಗಿ ಕರೆದುಕೊಳ್ಳುತ್ತಿದ್ದರು.

ನಮ್ಮ ಶರೀರದಲ್ಲಿನ ತಲೆ ಒಂದು ಪೆಟ್ಟಿಗೆಯಂತೆ ಇದೆ. ಅದರಲ್ಲಿ ಕ್ಷರನು, ಅಕ್ಷರನು ಎನ್ನುವ ಎರಡು ಆತ್ಮಗಳು ಕಳ್ಳರಂತೆ ಕಾಣಿಸದಹಾಗೆ ಇದ್ದಾರೆ. ಆ ಇಬ್ಬರ ಬೆಲೆ, ಜ್ಞಾನ ತಿಳಿದವರಿಗೆ ಮಾತ್ರವೇ ಅರ್ಥವಾಗುತ್ತದೆ. ಮನುಷ್ಯ ಜ್ಞಾನದಮೇಲೆ ಆಸಕ್ತಿ ಹೊಂದಿರುವಾಗಲೇ ಆತ್ಮ, ಜೀವಾತ್ಮಗಳು ತಿಳಿಯಬಲ್ಲರು. ಶ್ರದ್ಧೆಯಿಲ್ಲದವರು ಎಷ್ಟು ಪ್ರಯತ್ನಿಸಿದರೂ ಇವರನ್ನು ಗುರುತಿಸಲಾರರು. ಮೂವರು ಪುರುಷರಲ್ಲಿ, ಇಬ್ಬರು ಪುರುಷರು ಶರೀರದಲ್ಲಿ ಇದ್ದಾರೆ. ಆ ಇಬ್ಬರು ಪುರುಷರ ಗುರುತಿಗಾಗಿ ಪೆಟ್ಟಿಗೆಯಲ್ಲಿನ ಕಳ್ಳರನ್ನು ಹೇಳಿದ್ದಾರೆ. ಯಾವ ವಿಧವಾಗಿ ಇಬ್ಬರು ಕಳ್ಳರಿಗೆ ವಿರುದ್ಧ ಭಾವನೆಯಿಂದ ಅವರನ್ನು ಹಿಡಿದು ಕೊಳ್ಳಬೇಕೆನ್ನುವಷ್ಟು ಕಾಲ ಅವರು ಯಾರಿಗೂ ಸಿಗಲಿಲ್ಲ, ಅವರು ದೊಡ್ಡವರೆನ್ನುವ ಭಾವನೆ ರಾಜನಲ್ಲಿಯೂ, ಪ್ರಜೆಗಳಲ್ಲಿಯೂ ಬಂದಿ ದೆಯಾದ್ದರಿಂದ, ಇಬ್ಬರು ಕಳ್ಳರು ಸುಲಭವಾಗಿ ಸಿಕ್ಕಿದ್ದಾರೆ, ರಾಜ ತನ್ನ ರಾಜ್ಯವನ್ನು, ಮಕ್ಕಳನ್ನು ಅವರಿಗೇ ಕೊಡುತ್ತೇನೆಂದು ಅಂದುಕೊಂಡ ನಂತರ ಇವರು ಇಂತಹ ಕಳ್ಳರೆಂದು ದೊರೆತಿದ್ದಾರೆ. ಅದೇ ವಿಧವಾಗಿ, ನಾವು ನಮಗಿರುವುದು ಸರ್ವವು ಕ್ಷರಾಕ್ಷರರಿಗೇ ಸಮರ್ಪಣೆ ಎಂದುಕೊಂಡಾಗಲೇ ಎರಡು ಆತ್ಮಗಳು ನಮಗೆ ತಿಳಿಯಲ್ಪಡುತ್ತವೆ. ಕಳಿಂಗ ರಾಜ್ಯದಲ್ಲಿಯೇ ಇರುತ್ತಾ, ಕೊನೆಗೆ ರಾಜಮಂದಿರ ದಲ್ಲಿಯೇ ಇರುತ್ತಾ ಇಬ್ಬರು ಹೇಗೆ ತಿಳಿಯಲ್ಪಡಲಿಲ್ಲವೊ, ಹಾಗೆ ನಮ್ಮ ಶರೀರದಲ್ಲಿಯೇ ಇರುತ್ತಾ, ಕೊನೆಗೆ ಶರೀರದಲ್ಲಿ ರಾಜಮಂದಿರದಂತಹ ತಲೆಯಲ್ಲಿಯೇ ಇರುತ್ತಾ ಕ್ಷರ

ಪುರುಷನು ಯಾರೋ, ಅಕ್ಷರ ಪುರುಷನು ಯಾರೋ ತಿಳಿಯದಂತಿದ್ದಾರೆ. ಕಥೆಯಲ್ಲಿ, ಪೆಟ್ಟಿಗೆಯೊಳಗಿಂದ ಹೊರಗೆ ಬಂದು ತಿಳಿಯಲ್ಪಟ್ಟಿರುವುದರಿಂದ, ಅವರನ್ನು "ಪೆಟ್ಟಿಗೆಯಲ್ಲಿ ಇಬ್ಬರು ಕಳ್ಳರು ಯಾರು" ಎಂದು ಒಗಟಿನಲ್ಲಿ ಪ್ರಶ್ನಿಸಬೇಕಾಗಿ ಬಂದಿದೆ. ಈ ಒಗಟು ಪ್ರಶ್ನೆಗೆ ಆತ್ಮ, ಜೀವಾತ್ಮ ಎಂದು ಉತ್ತರವನ್ನು ಹೇಳಬಹುದು. ಹಿರಿಯರು ಹೇಳಿದ ಒಗಟು ಚಿಕ್ಕದೇ ಆದರೂ, ಅದರ ಉತ್ತರದಲ್ಲಿನ ಜ್ಞಾನವಿವರ ಬಹಳ ದೊಡ್ಡದಾಗಿದೆ.

**ನಿನ್ನ ಹಿಂದೆ ನಿನ್ನನ್ನು ನೋಡುತ್ತಿರುವ ಭೂತಗಳು ಇವೆ. ಜ್ಞಾನಿಗಳಿಗೆ ವಿರುದ್ಧವಾಗಿ ಮಾತನಾಡಿದರೆ ಅವರು ನಿನ್ನನ್ನು ಬಿಡುವುದಿಲ್ಲ.**

## 15. ರಂಗನು, ಪಿಂಗನು, ಒಳ್ಳಿನಲ್ಲಿ ಹಾಕಿದರೆ ನುಣ್ಣಗಾಗುವುದಿಲ್ಲ. ಯಾರು?

ನಮ್ಮ ಶರೀರದಲ್ಲಿ ಎರಡು ಆತ್ಮಗಳಿರುವಂತೇ, ಪಾಪ ಪುಣ್ಯ ಎನ್ನುವ ಎರಡು, ಕಾರ್ಯಕ್ಕೆ ಕಾರಣವಾದವು ಇವೆ. ಪಾಪಪುಣ್ಯಗಳಿಂದಲೇ ನಾವು ಸುಖ ದುಃಖಗಳನ್ನು ಅನುಭವಿಸುತ್ತಿದ್ದೇವೆ. ಪ್ರತಿ ಕೆಲಸಕ್ಕು ಕಾರಣವಾದ ಕರ್ಮವನ್ನು ಬಿಡಿಸಿ ನೋಡಿದರೆ, ಪಾಪಪುಣ್ಯಗಳಾಗಿ ತಿಳಿಯುತ್ತಿವೆ. ಪಾಪ ಪುಣ್ಯಗಳನ್ನೇ ಒಗಟಿನಲ್ಲಿ ರಂಗನು, ಪಿಂಗನು ಎನ್ನುವ ಜೋಡಿವ್ಯಕ್ತಿಗಳಾಗಿ ಹೇಳಲ್ಪಟ್ಟಿದ್ದಾರೆ. ಮನುಷ್ಯ ಸ್ವಲ್ಪ ಜ್ಞಾನವನ್ನು ತಿಳಿದುಕೊಂಡ ನಂತರ, ನಮ್ಮ ಶರೀರದಲ್ಲಿನ ಕರ್ಮಗಳು ತಿಳಿಯಲ್ಪಡುತ್ತವೆ. ಕರ್ಮಗಳನ್ನು ಜ್ಞಾನಶಕ್ತಿಯಿಂದ ಇಲ್ಲದಂತೆ ಮಾಡಿಕೊಂಡ ದಿನದಂದು ಮನುಷ್ಯನಿಗೆ ಜನ್ಮ ರಾಹಿತ್ಯ ಉಂಟಾಗಿ, ಮುಕ್ತಿ ಹೊಂದಿದವನಾಗಿ ದೇವರಲ್ಲಿ ಐಕ್ಯವಾಗಿಹೋಗುತ್ತಾನೆ. ಜ್ಞಾನದಿಂದ ಕರ್ಮವನ್ನು ಕಳೆದುಕೊಳ್ಳಬೇಕೆಂದು ಭಗವದ್ಗೀತೆಯಲ್ಲಿ ಭಗವಂತನು ವಿವರವಾಗಿ ಹೇಳಿದ್ದರೂ, ಯೋಗ ಮಾಡುವುದರಿಂದ ಉಂಟಾದ ಜ್ಞಾನಾಗ್ನಿಯಿಂದ ಕರ್ಮಗಳು ಸುಟ್ಟುಹೋಗುತ್ತವೆಂದು ಗೀತೆಯಲ್ಲಿ ಹೇಳಿದ್ದರೂ, ಭಗವಂತನ ಮಾತುಗಳನ್ನು ಅರ್ಥ ಮಾಡಿಕೊಳ್ಳದ ಮನುಷ್ಯರು, ಭಗವಂತನ ಮಾತುಗಳನ್ನು ಬಿಟ್ಟು ಭೂಮಿಮೇಲೆ ಬೋಧಕರು ಹೇಳಿದ ಮಾತುಗಳನ್ನು ಕೇಳಿ, ಅದೇ

ಸರಿಯಾದ ಜ್ಞಾನವೆಂದು ಭ್ರಮಿಸಿ ದೇವರು ಹೇಳಿದ ಯೋಗಗಳನ್ನು ಬಿಟ್ಟು ಧ್ಯಾನಗಳನ್ನು ಮಾಡುತ್ತಿರುತ್ತಾರೆ. ಆದರೇ ಧ್ಯಾನಗಳಿಂದ ಕರ್ಮಗಳು ಹೋಗುವುದಿಲ್ಲವೆಂದು ಬಹಳಜನರಿಗೆ ತಿಳಿದಿಲ್ಲ.

ಒಳ್ಳನ್ನು ಎಲ್ಲರೂ ನೋಡಿಯೇ ಇರುತ್ತಾರೆ. ಒಳ್ಳಲ್ಲಿ ಹಾಕಿ ಒನಕೆಯಿಂದ ಕುಟ್ಟುವುದರಿಂದ, ಒಳ್ಳಿನಲ್ಲಿನ ವಸ್ತುವು ನುಣ್ಣಗಾಗಿ ಹೋಗುತ್ತದೆ. ಒಳ್ಳಿನಲ್ಲಿ ಹಾಕಿದ ವಸ್ತುವನ್ನು ಒಂದುಸಲ ಕುಟ್ಟುತ್ತಾರೆ, ನಂತರ ಎರಡನೆಸಲ ಆ ನಂತರ ಮೂರನೆಸಲ ಹೀಗೆ ನಾಲ್ಕು, ಐದು, ಆರು ಎಂದು ವರಸೆಯಾಗಿ ಐವತ್ತು ಇಲ್ಲವೆ ಅರವತ್ತುಸಲ ಒನಕೆಯಿಂದ ಕುಟ್ಟಿದರೆ, ಒಳ್ಳಿನಲ್ಲಿನ ವಸ್ತುಗಳು ನುಣ್ಣಗಾಗುತ್ತವೆ. ಹಾಗೆಯೇ ಧ್ಯಾನವೆನ್ನುವ ಒಳ್ಳಿನಲ್ಲಿ, ಮಂತ್ರವೆನ್ನುವುದನ್ನು, ಧ್ಯಾಸ ಎನ್ನುವ ಒನಕೆಯಿಂದ ಒಂದು, ಎರಡು, ಮೂರು, ನಾಲ್ಕು ಎಂದು ವರಸೆಯಾಗಿ ನೂರುಸಲವಾಗಲಿ ಇಲ್ಲವೆ ಅದಕ್ಕಿಂತ ಹೆಚ್ಚಿಗಾಗಲಿ ಜಪಿಸುವುದನ್ನು ಧ್ಯಾನ ಎನ್ನುತ್ತೇವೆ. ಮಂತ್ರವನ್ನಾಗಲಿ, ಆಕಾರವನ್ನಾಗಲಿ, ಗುರುತನ್ನಾಗಲಿ ಶ್ವಾಸವನ್ನಾಗಲಿ, ಯಾವುದರ ಮೇಲೆ ಧ್ಯಾಸ ಇಟ್ಟುಕೊಂಡರೂ ಅದೇ ಧ್ಯಾನವಾಗುತ್ತದೆ. ಧ್ಯಾನ ಎಷ್ಟುಕಾಲ ಮಾಡಿದರೂ ಕರ್ಮಗಳು ಹೋಗುವುದಿಲ್ಲ. ಧ್ಯಾನ ಮಾಡುವುದರಿಂದ ಮನುಷ್ಯ ತಪಸ್ವಿ ಆಗಬಲ್ಲನು. ಅದರಿಂದ ಆತನಿಗೆ ಪುಣ್ಯ ಲಭಿಸುತ್ತದೆ. ಪುಣ್ಯವನ್ನು, ಪಾಪವನ್ನು ಕಳೆದುಕೊಳ್ಳುವುದಕ್ಕೆಂದು ಧ್ಯಾನ ಮಾಡಿ ಪುಣ್ಯವನ್ನು ತಂದುಕೊಳ್ಳುವುದು, ಒಂದುವಿಧವಾಗಿ ತಪ್ಪುಕೆಲಸವಾಗುತ್ತದೆ. ಮತ್ತೊಂದು ವಿಧವಾಗಿ ತಿಳುವಳಿಕೆಯಿಲ್ಲದ ಕೆಲಸವಾಗಿಯೋ, ಅಜ್ಞಾನದ ಕೆಲಸವಾಗಿಯೋ ಲೆಕ್ಕಿಸಲ್ಪಡುತ್ತದೆ. ಧ್ಯಾನದಿಂದ ಪಾಪಪುಣ್ಯಗಳು ನಶಿಸಿಹೋಗುವು ದಿಲ್ಲ ಎಂದು ತಿಳಿಸುವ ನಿಮಿತ್ತ, ಈ ಒಗಟಿನಲ್ಲಿ ರಂಗನು, ಪಿಂಗನು ಒಳ್ಳಿನಲ್ಲಿ ಹಾಕಿದರೆ ನುಣ್ಣಗಾಗುವುದಿಲ್ಲ ಎಂದು ಹೇಳಿ, ನಮಗೆ ತಿಳಿಯುವಂತೆ, ನಾವು ಅವುಗಳನ್ನು ಕುರಿತು ಆಲೋಚಿಸುವಂತೆ, ಯಾರು ಎಂದು ಪ್ರಶ್ನಿಸಿದ್ದಾರೆ. ಒಳ್ಳು ಏನೊ, ರಂಗನು ಯಾರೊ, ಪಿಂಗನು ಯಾರೊ ಆಲೋಚನೆ ಮಾಡುವುದರಿಂದ ತಿಳಿದುಹೋಗಿದೆ.

**ನಿನ್ನ ದೇಹದಲ್ಲಿ ನೀನ್ಯಾರೋ ತಿಳಿಯದೇ, ದೇಶದಲ್ಲಿ ನಿನ್ನ ಪಾತ್ರವನ್ನು ಕುರಿತು ಆಲೋಚಿಸಬೇಡ.**

## 16. ಎರಡು ಹೊಡೆಯುತ್ತವೆ, ಒಂದು ಹುಟ್ಟುತ್ತದೆ. ಹೊಡೆಯುವುದು ಯಾವುದು? ಹುಟ್ಟುವುದು ಯಾವುದು?

ಮನುಷ್ಯ ಜೀವನದಲ್ಲಿ ಹುಟ್ಟಿದಾಗಿನಿಂದ ಎರಡು ಇವೆ. ಒಂದು ಹೊಸದಾಗಿ ಹುಟ್ಟಬೇಕಾಗಿದೆ. ಮನುಷ್ಯನಲ್ಲಿ ಹೊಸದಾಗಿ ಹುಟ್ಟಬೇಕಾಗಿರುವುದು, ಮನುಷ್ಯ ಹೊಸದಾಗಿ ಕಲಿಯಬೇಕಾಗಿರುವುದು ದೈವಜ್ಞಾನವನ್ನೇ. ಮನುಷ್ಯನ ಜೀವನದಲ್ಲಿ ಹುಟ್ಟಿದಾಗಿನಿಂದ ಇರುವವು ಎರಡು ಇವೆ. ಅವುಗಳೇ ಮನುಷ್ಯನನ್ನು ಜೀವನದಲ್ಲಿ ಅನೇಕ ಅನುಭವಗಳಿಗೆ ಗುರಿ ಮಾಡುತ್ತಿವೆ. ಮನುಷ್ಯ ಎಂದಿಗೂ ಪ್ರಶಾಂತತೆ ಇಲ್ಲದೆ, ಒಳ್ಳೆಯ ಕೆಟ್ಟ ಅನುಭವಗಳಲ್ಲಿ ಎಂದಿಗೂ ಹೊದ್ದಾಡುತ್ತಿದ್ದಾನೆ. ಮನುಷ್ಯನನ್ನು ಯಾವುದೊ ಒಂದು ವಿಧವಾಗಿ ವೇದಿಸುವವು ಪಾಪಪುಣ್ಯಗಳು. ಆದ್ದರಿಂದ ಈ ಒಗಟಿನಲ್ಲಿ ಎರಡು ಹೊಡೆಯುತ್ತವೆಂದು ಪಾಪಪುಣ್ಯಗಳನ್ನು ಕುರಿತು ಹೇಳಿದ್ದಾರೆ. ಪಾಪಪುಣ್ಯಗಳ ಬಾಧೆಗಳನ್ನು ತಪ್ಪಿಸಿಕೊಳ್ಳಬೇಕೆನ್ನುವ ಮನುಷ್ಯ, ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆ. ಜ್ಞಾನದಿಂದಲೇ ಹೊಡೆಯುವ ಕರ್ಮ ಹೋಗುತ್ತದೆ ಎಂದು ತಿಳಿದ ನಂತರ, ಮನುಷ್ಯ ಜ್ಞಾನವನ್ನು ತಿಳಿಯುತ್ತಾನೆ. ಆದ್ದರಿಂದ ಎರಡು ಹೊಡೆದರೆ, ಒಂದು ಹುಟ್ಟುತ್ತದೆಂದು ಜ್ಞಾನವನ್ನು ಉದ್ದೇಶಿಸಿ ಹೇಳಿದ್ದಾರೆ.

**ದೇಶಕ್ಕಾಗಿ ಮರಣಿಸಿದರೆ ದೇವರ ಹತ್ತಿರಕ್ಕೆ ಹೋಗುತ್ತೀಯಾ ಎಂದು ಹೇಳುವವರು ಇದ್ದಾರೆ. ಕೊನೆಗೆ ದೆವ್ವದ ಹತ್ತಿರಕ್ಕು ಕೂಡಾ ಹೋಗಲಾರೆ.**

## 17. ಮಳೆಯಲ್ಲಿ ಬೆಟ್ಟವೆಲ್ಲಾ ತೋಯ್ದರೂ ಲಿಂಗ ತೋಯುವುದಿಲ್ಲ, ಬೆಟ್ಟ ಯಾವುದು? ಲಿಂಗ ಯಾವುದು.

ಒಂದು ದೊಡ್ಡ ಬೆಟ್ಟವಿದೆ. ಆ ಬೆಟ್ಟ ತಗ್ಗುದಿನ್ನೆಗಳಿಂದ, ಕಣಿವೆಗಳಾಗಿ, ಗುಣಿಗಳುಬಿದ್ದು, ಭಾಗಗಳಾಗಿ ಸೀಳಿಹೋಗಿದೆ. ಪರ್ವತದಲ್ಲಿ ಕಲ್ಲು, ರಾಶಿರಾಶಿಗಳಾಗಿ, ಗಿಡಗಳು ಗುಂಪು ಗುಂಪುಗಳಾಗಿ ಇವೆ. ಅಲ್ಲಲ್ಲಿ ಬೆಟ್ಟದಲ್ಲಿ ಗುಹೆಗಳು ಸುರಂಗಗಳಾಗಿ ಇವೆ. ಅದು ಒಂದು ದೊಡ್ಡ ಬೆಟ್ಟವಾದ್ದರಿಂದ,

ಬೆಟ್ಟದ ತುಂಬಾ ಕಲ್ಲುಗಳು ತುಂಬಿವೆ. ಆ ಬೆಟ್ಟದಲ್ಲಿರುವ ಕಲ್ಲುಗಳೆಲ್ಲವೂ ಲಿಂಗಾಕೃತಿಯನ್ನು ಹೊಂದಿ ದುಂಡಾಗಿ ಇರುವುದರಿಂದ ಅದು ಒಂದು ಪ್ರತ್ಯೇಕವಾದ ಬೆಟ್ಟ. ಬೆಟ್ಟವೆಲ್ಲಾ ದುಂಡನೆ ಕಲ್ಲುಗಳಿಂದ, ಹಸಿರು ಗಿಡಗಳಿಂದ ಕೂಡಿರುವುದೇ ಅಲ್ಲದೆ, ಬೆಟ್ಟದ ಮಧ್ಯದಲ್ಲಿ ಒಂದು ಗುಹೆ, ಗುಹೆ ಮಧ್ಯದಲ್ಲಿ ಒಂದು ದುಂಡನೆ ಕಲ್ಲು. ಆ ಕಲ್ಲು ಸಹ ಲಿಂಗಾಕೃತಿಯನ್ನು ಹೋಲಿರುವುದರಿಂದ, ಆ ಬೆಟ್ಟಕ್ಕೆ ಕಳಿಂಗ ಬೆಟ್ಟವೆಂದು ಹೆಸರು ಇದೆ. ಕಳಿಂಗ ಬೆಟ್ಟದಲ್ಲಿ ಗುಹೆಯಲ್ಲಿನ ಲಿಂಗಕ್ಕೆ ತಿಂಗಳಿಗೊಮ್ಮೆ ಪಕ್ಕದ ಗ್ರಾಮಸ್ಥರು ಬಂದು ಪೂಜೆಮಾಡಿ ಹೋಗುವರು. ಕಳಿಂಗ ಬೆಟ್ಟದಲ್ಲಿ ಎಲ್ಲಾ ಶಿವಲಿಂಗಗಳೇ ಆದರೂ ಗುಹೆಯಲ್ಲಿ ಬೋಡಿಲಿಂಗ ವೊಂದು ಇದೆಯೆಂದು ಹೇಳುತ್ತಿದ್ದರು. ಗುಹೆಯಲ್ಲಿನ ಬೋಡಿಲಿಂಗ ಕಳಿಂಗ ಬೆಟ್ಟದಲ್ಲಿ ಅಷ್ಟು ಕಲ್ಲುಗಳಲ್ಲಿ ಒಂದು ಕಲ್ಲಾಗಿದ್ದರೂ, ಬೋಡಿಲಿಂಗವೆಂದು ಪ್ರತ್ಯೇಕ ಹೆಸರು ಹೊಂದಿದೆ. ಮಳೆಗಾಲದಲ್ಲಿ ದೊಡ್ಡ ಮಳೆಗಳು ಬಂದಾಗ ಬೆಟ್ಟವೆಲ್ಲಾ ಒದ್ದೆಯಾಗಿ ಬೆಟ್ಟದಲ್ಲಿನ ನೀರೆಲ್ಲವೂ ಸರೋವರಗಳ ಮೂಲಕ ಹರಿಯುತ್ತಿತ್ತು, ಮಳೆಬಂದಾಗ ಬೆಟ್ಟವೆಲ್ಲವೂ ಒದ್ದೆಯಾದರೂ, ಬೆಟ್ಟದಲ್ಲಿನ ಗಿಡಗಳು, ಕಲ್ಲುಗಳೆಲ್ಲ ಒದ್ದೆಯಾಗಿ, ಗುಹೆಗಳಲ್ಲಿ ಸಹ ನೀರು ಸೋರಿ, ಗುಹೆಗಳೆಲ್ಲ ಒದ್ದೆಯಾಗಿ ಬದಲಾಗಿಹೋದರೂ, ಬೋಡಿಲಿಂಗ ಮಾತ್ರ ಒದ್ದೆಯಾಗದೆ ಇರುತ್ತದೆ. ಗುಹೆಗಳಲ್ಲಿ ಸಹ ಮೇಲಿನ ಅಂಚುಗಳಿಂದ ನೀರು ಸೋರುತ್ತಿರುವಾಗ ಗುಹೆಯೆಲ್ಲವೂ ಒದ್ದೆಯಾಗಿ ಹೋಗುತ್ತಿದೆ. ಆದರೇ ಬೋಡಿಲಿಂಗ ಇರುವಕಡೆ ಮಾತ್ರ, ಮೇಲ್ಭಾಗದಲ್ಲಿ ನಾಲ್ಕು ಮೂಲೆಗಳಿರುವ ಚತುರಸ್ರಾಕಾರ ಇರುವ ದೊಡ್ಡ ಕಲ್ಲು ಇರುವುದರಿಂದ, ಆ ಕಲ್ಲಿನ ಕೆಳಗಿರುವ ಒಂದು ಚದರ ವಿಸ್ತೀರ್ಣ ಭೂಮಿ ಸ್ವಲ್ಪವೂ ಒದ್ದೆಯಾಗುವುದಿಲ್ಲ. ನೂರು ಚದರ ಅಡಿಗಳ ಪ್ರಾಂತವನ್ನು ಒಂದು ಚದರವೆಂದು ಹೇಳುತ್ತೇವೆ. ನೂರು ಚದರ ಅಡಿಗಳ ವಿಸ್ತೀರ್ಣದಲ್ಲಿ ಬೋಡಿಲಿಂಗ, ಮಧ್ಯದಲ್ಲಿ ಇರುವುದರಿಂದ ಲಿಂಗವು ಸ್ವಲ್ಪವೂ ಒದ್ದೆಯಾಗುವುದಕ್ಕೆ ಸಾಧ್ಯವಿಲ್ಲ. ಈ ವಿಧವಾಗಿ ಬೆಟ್ಟವೆಲ್ಲ ಒದ್ದೆಯಾಗಿ ಕಲ್ಲುಗಳೆಲ್ಲ ಒದ್ದೆಯಾದರೂ ಆ ಬೆಟ್ಟದಲ್ಲಿಯೇ ಇರುವ ಬೋಡಿಲಿಂಗ ಮಾತ್ರ ಒದ್ದೆಯಾಗುವುದಿಲ್ಲ, ಒದ್ದೆಯಾಗುವುದಕ್ಕೆ ಅವಕಾಶವೇ ಇಲ್ಲ. ಇದು ಕಳಿಂಗ ಬೆಟ್ಟವೊಂದರ ಪ್ರತ್ಯೇಕತೆ. ಬೆಟ್ಟವೆಲ್ಲ ದುಂಡನೆಯ ಕಲ್ಲುಗಳೇ ಇದ್ದರೂ, ಒಂದು ಒದ್ದೆಯಾಗದ ಕಲ್ಲಿಗೆ

ಮಾತ್ರ ಬೋಡಿಲಿಂಗವೆಂದು ಹೆಸರುಬಂದಿದೆ. ಅಲ್ಲಿರುವವೆಲ್ಲ, ಒಂದೇ ಆಕೃತಿಯನ್ನು ಹೊಂದಿರುವ ಕಲ್ಲುಗಳೇ, ಆದರೆ ಬೋಡಿಲಿಂಗವೆಂದು ಒಂದೇ ಕಲ್ಲು ಕರೆಯಲ್ಪಡುತ್ತಿದೆ. ಇದು ಒಂದು ಬೆಟ್ಟದ ಚರಿತ್ರೆಯಾಗಿದ್ದು, ಈ ಬೆಟ್ಟವನ್ನು ಹೋಲಿದ ಚರಿತ್ರೆ ಇರುವ ಬೆಟ್ಟವಲ್ಲದ ಬೆಟ್ಟ ಒಂದಿದೆ. ಅದನ್ನು ಕುರಿತು ಈಗ ತಿಳಿದುಕೊಳ್ಳೋಣ.

ಮನುಷ್ಯನ ಶರೀರ ಎಲ್ಲರಿಗೂ ತಿಳಿದಿರುವುದೇ, ಆದರೇ ಇದು ಕಳಿಂಗ ಬೆಟ್ಟದಂತಹ ಬೆಟ್ಟವೆಂದು ಮಾತ್ರ ನಮಗೆ ತಿಳಿದಿಲ್ಲ. ಎಷ್ಟೋ ದೊಡ್ಡದಾದ ಕಳಿಂಗ ಬೆಟ್ಟಕ್ಕು, ಮನುಷ್ಯನ ಶರೀರಕ್ಕು ಹೋಲಿಕೆ ಏನು? ಎಂದು ಯಾರಾದರೂ ಪ್ರಶ್ನಿಸಬಹುದು. ಅದನ್ನು ಕುರಿತು ತಿಳಿದುಕೊಳ್ಳೋಣ. ನಮ್ಮ ಶರೀರದಲ್ಲಿ ಕ್ಷರನು, ಅಕ್ಷರನು ಇಬ್ಬರೂ ಇದ್ದಾರೆ. ಕ್ಷರನು (ಜೀವಾತ್ಮ) ಗುಣಚಕ್ರದಲ್ಲಿನ ಗುಣಗಳ ಮಧ್ಯದಲ್ಲಿ ಇರುವಾಗ, ಅಕ್ಷರನು (ಆತ್ಮ) ಶರೀರವೆಲ್ಲಾ ವ್ಯಾಪಿಸಿದ್ದಾನೆ. ಶರೀರವೆಲ್ಲವನ್ನು ಬೆಟ್ಟಕ್ಕೆ ಹೋಲಿಸಿಕೊಂಡರೆ, ಶರೀರವೆಲ್ಲಾ ಅಕ್ಷರನಾದ ಆತ್ಮ ವ್ಯಾಪಿಸಿರುವುದರಿಂದ, ಬೆಟ್ಟವೆಲ್ಲಾ ಲಿಂಗವನ್ನು ಹೋಲಿದ ಕಲ್ಲುಗಳಿರುವಂತೆ, ಶರೀರವೆಲ್ಲಾ ಮೂರು ಲಿಂಗಗಳಲ್ಲಿ (ಮೂರು ಆತ್ಮಗಳಲ್ಲಿ) ಒಂದು ಲಿಂಗವಾದ ಆತ್ಮ ವ್ಯಾಪಿಸಿದೆಯೆಂದು ಹೇಳಬಹುದು. ಜೀವಾತ್ಮ ಕೂಡಾ ಒಂದು ಲಿಂಗವೇ ಅಲ್ಲವೆ! (ಲಿಂಗ ಎಂದರೇ ಆತ್ಮಯೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು). ಶರೀರವೆಲ್ಲಾ ಲಿಂಗವನ್ನು ಹೋಲಿದ ಆತ್ಮ ವ್ಯಾಪಿಸಿರುವಂತೆ, ಬೆಟ್ಟವೆಲ್ಲಾ ಲಿಂಗವನ್ನು ಹೋಲಿಕೆಯುಳ್ಳ ಕಲ್ಲುಗಳಿವೆ. ಬೆಟ್ಟದಲ್ಲಿ ಒಂದು ಗುಹೆ, ಗುಹೆಯಲ್ಲಿ ಒಂದು ಕಲ್ಲು, ಅದೇ ಬೋಡಿಲಿಂಗ ಎನ್ನುವಂತೆ, ಶರೀರದೊಳಗೆ ಗುಹೆಯಂತಹ ತಲೆಯಲ್ಲಿ, ಚತುರಸ್ರಾಕಾರದ ಚದರಕಲ್ಲು ಇರುವಂತೆ ನಾಲ್ಕು ಭಾಗಗಳಿರುವ ಗುಣಚಕ್ರವೊಂದಿದೆ. ಅದರಲ್ಲಿ (ಗುಣಚಕ್ರದಲ್ಲಿ) ಒಂದು ಆತ್ಮವಿದೆ. ಅದೇ ಜೀವಾತ್ಮ. ಗುಹೆಯಲ್ಲಿನ ಕಲ್ಲಿಗೆ ಬೋಡಿಲಿಂಗವೆಂದು ಹೆಸರು ಬಂದಿದೆ. ಹಾಗೆಯೇ ಗುಣಚಕ್ರದಲ್ಲಿನ ಜೀವಾತ್ಮಗು ಕೂಡಾ ಬೋಡಿಲಿಂಗ ಎನ್ನಬಹುದು. ಏಕೆಂದರೇ ಜೀವಾತ್ಮಗೆ ದೃಷ್ಟಿಯಿಲ್ಲ, ಶ್ರವಣಶಕ್ತಿಯಿಲ್ಲ, ಸ್ಪರ್ಶವಿಲ್ಲ, ರುಚಿಯಿಲ್ಲ, ವಾಸನೆಯನ್ನು ನೋಡುವ ಶಕ್ತಿಯಿಲ್ಲ. ಆದ್ದರಿಂದ ಜೀವಾತ್ಮವನ್ನು ಒಬ್ಬ ಅಂಗವಿಕಲನಿಗೆ ಸಮಾನವಾಗಿ ಹೇಳುತ್ತಾ, ಅವನನ್ನು ಬೋಡಿಲಿಂಗ ಎನ್ನುತ್ತಿದ್ದೇವೆ.

ಬೋಡಿಲಿಂಗನಾದ ಜೀವಾತ್ಮ, ನಾಲ್ಕು ಭಾಗಗಳಾಗಿರುವ ಗುಣಚಕ್ರದಲ್ಲಿ ಗುಣಗಳ ಮಾಯೆಯಲ್ಲಿ ಇರುವುದರಿಂದ, ಅವನವರೆಗು ಹೊರಗಿನ ಆಕಾಶ, ಅಗ್ನಿ, ಗಾಳಿ, ನೀರು, ಭೂಮಿ ಬರುವುದಕ್ಕೆ ಸಾಧ್ಯವಿಲ್ಲ. ಶರೀರವೆಲ್ಲಾ ಉಗುರಿನಿಂದ ಜುಟ್ಟಿನವರೆಗು ವ್ಯಾಪಿಸಿರುವ ಆತ್ಮಕ್ಕೇ, ಹೊರಗಿನ ಪಂಚಭೂತಗಳ ಕೆಲಸಗಳು ತಾಕುತ್ತವೆ. ಹೊರಗಿನವರೆಗು ಶರೀರವೆಲ್ಲಾ ವ್ಯಾಪಿಸಿರುವ ಆತ್ಮ ಮಳೆನೀರಿಗೆ ತೋಯುತ್ತದೆ. ಗಾಳಿಗೆ ತಳ್ಳಲ್ಪಡುತ್ತಿದೆ. ಅಗ್ನಿಗೆ ಸುಡುತ್ತಿದೆ. ಅಷ್ಟೇ ಅಲ್ಲದೆ ಆತ್ಮ ಶರೀರದ ಹೊರಗಿನ ಅಂಚಿನವರೆಗು ಇರುವುದರಿಂದ ಕತ್ತಿಗೆ ಖಂಡಿಸಲ್ಪಡುತ್ತಿದೆ. ಆದ್ದರಿಂದ ಬೆಟ್ಟವೆಲ್ಲಾ ಒದ್ದೆಯಾಗುತ್ತಿದೆಯೆಂದು, ಬೆಟ್ಟದ ಮೇಲೆ ಲಿಂಗಾಕೃತಿ ಯಲ್ಲಿರುವ ಕಲ್ಲುಗಳೆಲ್ಲ ಒದ್ದೆಯಾಗುತ್ತಿವೆಯೆಂದು ಕಥೆಯಲ್ಲಿ ಹೇಳಿಕೊಂಡಿದ್ದೇವೆ. ಹೊರಗಿನವರೆಗು ಇರುವ ಆತ್ಮ ಮಳೆಗೆ ತೋಯುತ್ತಿದ್ದರೂ, ಕತ್ತಿಗೆ ಖಂಡಿಸಲ್ಪಡುತ್ತಿದ್ದರೂ ಒಳಗಿರುವ ಬೋಡಿಲಿಂಗವಾದ ಜೀವಾತ್ಮ ಮಾತ್ರ ಮಳೆಗೆ ತೋಯಲಿಲ್ಲ, ಕತ್ತಿಗೆ ಖಂಡಿಸಲ್ಪಡುತ್ತಿಲ್ಲ. ಬೆಟ್ಟದಲ್ಲಿ ನಾಲ್ಕು ಅಂಚುಗಳಿರುವ ಬಂಡೆಯ ಕೆಳಗೆ ಲಿಂಗವಿರುವಂತೆ, ಶರೀರದಲ್ಲಿ ನಾಲ್ಕು ಭಾಗಗಳಾಗಿರುವ ಗುಣಚಕ್ರದಲ್ಲಿ ಜೀವಿಯು, ಹೊರಗೆ ಆತ್ಮ ಒದ್ದೆಯಾದಂತಾಗಲಿ, ತುಂಡರಿ ಸಿದಂತಾಗಲಿ ತೋಯಲೂ ಇಲ್ಲ. ಖಂಡಿಸಲ್ಪಡಲು ಇಲ್ಲ. ಈ ಒಗಟಿನಲ್ಲಿ ಹೇಳಿದ ಬೆಟ್ಟ ಶರೀರವೆಂದೂ, ಲಿಂಗವು ಜೀವಾತ್ಮಯೆಂದು ಹೇಳಬಹುದು. ಶರೀರ ಒದ್ದೆಯಾದರೇ, ಆತ್ಮ ಒದ್ದೆಯಾದಂತೆ. ಆದರೂ ಒಳಗಿನ ಜೀವಾತ್ಮ ಯಾವ ಕಾರಣಕ್ಕೂ ಒದ್ದೆಯಾಗುವುದಿಲ್ಲ ಎಂದು ತಿಳಿಸುವ ಸಲುವಾಗಿ, ನಮ್ಮ ಹಿರಿಯರು ಈ ಒಗಟನ್ನು ಬಿಡಿಸಿ ಹೇಳೆಂದಿದ್ದಾರೆ.

**ಮತವೆನ್ನುವ ಮತ್ತಿಗೆ ಅಭ್ಯಾಸವಾಗಬೇಡ, ಅದು ನಿನ್ನನ್ನು ವಿಚಕ್ಷಣೆ ಇಲ್ಲದ ದಾಸನನ್ನಾಗಿ ಮಾಡುತ್ತದೆ.**

## 18. ಸಾವಿರ ಕಣ್ಣುಗಳ ಪ್ರಾಣಿ ಬೇಟೆಗೆ ಹೋಗಿ ಬೇಟೆಯಾಡುತ್ತದೆ. ಆ ಪ್ರಾಣಿ ಯಾವುದು?

ಭೂಮಿ ಮೇಲೆ ಯಾವ ಪ್ರಾಣಿಗೂ ಸಾವಿರಕಣ್ಣುಗಳು ಇರುವುದಿಲ್ಲ. ಆದ್ದರಿಂದ ಇದು ಪ್ರಪಂಚ ಸಂಬಂಧವಾದ ಪ್ರಾಣಿ ಅಲ್ಲವೆಂದು ಮೊದಲೇ

ತಿಳಿದುಹೋಗುತ್ತಿದೆ. ಪ್ರಪಂಚದಲ್ಲಿನ ಪ್ರಾಣಿಗಾದರೆ ಎರಡೇ ಕಣ್ಣಿರುತ್ತವೆ. ಆದರೆ ಈ ಒಗಟಿನಲ್ಲಿ ಹೇಳಿದ ಪ್ರಾಣಿಗೆ, ಸಾವಿರಕಣ್ಣುಗಳಿವೆಯೆಂದು ಹೇಳಿದ್ದಾರೆ. ಈ ಪ್ರಶ್ನೆ ಪೂರ್ವದಲ್ಲಿ ಸ್ವಲ್ಪ ಕುತೂಹಲ ಕೆರಳಿಸಿದೆ. ಬಹಳಜನ ಇದರ ಉತ್ತರ ಏನೆಂದು ಪ್ರಯತ್ನಿಸಿ ನೋಡಿದ್ದಾರೆ. ಅದರ ಉತ್ತರ ಯಾರ ಯೋಚನೆಗೂ ಬರಲಿಲ್ಲ. ಆಗ ಒಬ್ಬ ವ್ಯಕ್ತಿ, ಹೇಗಾದರೂ ಈ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಳ್ಳಬೇಕೆನ್ನುವ ಪ್ರಯತ್ನದಿಂದ, ಈ ಒಗಟನ್ನು ದೊಡ್ಡ ಹಲಗೆ ಮೇಲೆ (ಬೋರ್ಡಿನ ಮೇಲೆ) ಬರೆಯಿಸಿ, ಅದನ್ನು ಒಂದು ಗಾಡಿಗೆ ಎಲ್ಲರೂ ಓದುವಂತೆ ಕಟ್ಟಿಟ್ಟು, ತಾನೂ ಗಾಡಿಯಲ್ಲಿ ಪ್ರಯಾಣವಾಗಿ ಹೋಗಿದ್ದಾನೆ. ಭಾರತದೇಶದಲ್ಲಿ ಜ್ಞಾನಕ್ಕೆ ನಿಲಯವಾದ ದಕ್ಷಿಣದೇಶದಲ್ಲಿ, ಇದಕ್ಕೆ ಉತ್ತರ ದೊರೆಯಬಹುದು ಎನ್ನುವ ಉದ್ದೇಶದಿಂದ ಆಕಡೆ ಹೊರಟುಹೋಗಿದ್ದಾನೆ. ತನ್ನ ಗಾಡಿಗಿರುವ ಒಗಟನ್ನು ಊರೂರು ತಿಳಿಯುವಂತೆ ಮಾಡಿದ್ದಾನೆ. ಒಗಟು ಬರೆದಕಡೆ ಕೆಳಗಿನ ಭಾಗದಲ್ಲಿ, ಇದಕ್ಕೆ ಉತ್ತರ ಹೇಳಿದವರು ಯಾರಾದರೂ ಅವರೇ ನನಗೆ ಗುರು ಎಂದು ಬರೆದುಕೊಂಡಿದ್ದಾನೆ. ಹಾಗೆ ಸ್ವಲ್ಪ ಕಾಲ ಅಲೆದರೂ, ಯಾರೂ ಆ ಪ್ರಶ್ನೆಗೆ ಉತ್ತರವನ್ನು ಹೇಳಲಿಲ್ಲ. ಮೂರು ತಿಂಗಳಿಗಿಂತ ಹೆಚ್ಚಾಗಿ ಅಲೆದರೂ, ಯಾರೂ ಅದನ್ನು ಕುರಿತು ಒಂದುಮಾತು ಕೂಡಾ ಹೇಳದಿರುವುದಕ್ಕೆ ಆತನಿಗೆ ಬೇಸರಬಂದಿದೆ. ಕೊನೆಗೆ ಇನ್ನು ಪ್ರಯೋಜನೆ ಇಲ್ಲವೆಂದು, ಪುನಃ ಮನೆಗೆ ಹೋಗಬೇಕೆಂದುಕೊಂಡಿದ್ದಾನೆ.

ಕೊನೆಗೆ ಒಂದು ಊರನ್ನು ನೋಡಿ ಅಲ್ಲಿಂದ ಮನೆಗೆ ಹೊರಡಬೇಕೆಂದುಕೊಂಡು ಹತ್ತಿರದಲ್ಲಿರುವ ಊರಿಗೆ ಹೊರಟಿದ್ದಾನೆ. ಆ ಊರು ಹತ್ತಿರಕ್ಕೆ ಬರುತ್ತಿದಂತೆ ಊರಿನ ಹೊರಗೆ ಒಬ್ಬ ಮುದುಕನು ದಾರಿ ಪಕ್ಕದಲ್ಲಿ ಕಾಣಿಸಿ, ನಾನು ನಡೆಯಲಾರದಿದ್ದೇನೆ. ನೀನು ದಯೆಮಾಡಿ ನನ್ನನ್ನು ನಿನ್ನ ಗಾಡಿಯಲ್ಲಿ ಹತ್ತಿಸಿಕೊಂಡು ಊರಿನಲ್ಲಿ ಇಳಿಸೆಂದಿದ್ದಾನೆ. ಮೊದಲೇ ಉತ್ತರ ಸಿಗದೆ ಬೇಸರದಿಂದಿರುವ ಆತನು ಮುದುಕನು ಮಾತನಾಡಿದ ಮಾತುಗಳನ್ನು ಕೇಳಿ, ತನ್ನ ಬೋರ್ಡನ್ನು ತೋರಿಸಿ, ನನ್ನ ಪ್ರಶ್ನೆಗೆ ಉತ್ತರ ಎಲ್ಲಿ ದೊರೆಯುತ್ತದೊ ಹೇಳು, ಹಾಗಾದರೆ ನಿನ್ನನ್ನು ಗಾಡಿಯೊಳಗೆ ಹತ್ತಿಸಿಕೊಳ್ಳುತ್ತೇನೆ ಎಂದು ಹೇಳಿದ್ದಾನೆ. ಆಗ ಆ ಮುದುಕನು ಆ ಬೋರ್ಡಿನ ಮೇಲಿರುವ ಪ್ರಶ್ನೆಯನ್ನು

ನೋಡಿ, ನಿನ್ನ ಪ್ರಶ್ನೆ ನನ್ನ ಉಡಿದಾರದಷ್ಟು ಇಲ್ಲ, ಮೊದಲು ನನ್ನನ್ನು ಹತ್ತಿಸಿಕೊ ಹೇಳುತ್ತೇನೆ ಎಂದನಂತೆ. ಆ ಮುದುಕನ ಮಾತಿಗೆ ಆಶ್ಚರ್ಯಹೋದ ವಾಹನದಲ್ಲಿನ ವ್ಯಕ್ತಿ, ಏನು ಮಾತನಾಡದೆ ಗಾಡಿಯನ್ನು ನಿಲ್ಲಿಸಿ ಮುದುಕನನ್ನು ಹತ್ತಿಸಿಕೊಂಡಿದ್ದಾನೆ. ಆಗ ಆ ಮುದುಕನು ಮಾತನಾಡುತ್ತಾ "ನಮ್ಮ ಊರಿನ ಹೆಸರೇ ಸಂಶಯಗಳ ಪುರ. ನಮ್ಮ ಊರಿನವರು ಯಾವ ಸಂಶಯಕ್ಕಾದರೂ ಉತ್ತರವನ್ನು ಹೇಳಬಲ್ಲರು. ಆದ್ದರಿಂದ ಅದಕ್ಕೆ ಗುರುತಿಗಾಗಿ ಸಂಶಯಗಳ ಪುರ ಎಂದು ಹೆಸರು ಬಂದಿದೆ. ನಮ್ಮ ಊರಿನೊಳಗೆ ಬಂದವನಿಗೆ ಯಾವ ಸಂಶಯವಾಗಲಿ. ಯಾವ ಪ್ರಶ್ನೆಯಾಗಲಿ ಉಳಿಯುವುದಿಲ್ಲ. ನಿನ್ನ ಪ್ರಶ್ನೆಗೆ ನಮ್ಮ ಊರಿನಲ್ಲಿ 10 ವರ್ಷಗಳ ಹುಡುಗನು ಸಹ ಉತ್ತರ ಹೇಳಬಲ್ಲನು". ಎಂದು ಹೇಳಿದ್ದಾನೆ, ಆ ಮಾತುಗಳು ಕೇಳಿದ, ಪ್ರಶ್ನೆಗಾಗಿ ಪ್ರಯಾಣಿಸುವ ವಾಹನದಾರನು ಆಶ್ಚರ್ಯದಿಂದ "ನನ್ನ ಪ್ರಶ್ನೆ ಅಷ್ಟು ಸುಲಭವಾಗಿ ಕಾಣಿ ಸುತ್ತಿದೆಯಾ." ಎಂದು ಕೇಳಿದ್ದಾನೆ. ಅದಕ್ಕೆ ಮುದುಕನು ನಕ್ಕು "ನಮ್ಮ ಊರು ಸಂಶಯಗಳ ಪುರ ಎಂದು ಹೇಳಿದ್ದೇನೆ ಅಲ್ಲವೆ! ಸಂಶಯಗಳೆಂದರೇ ಪ್ರಶ್ನೆಗಳು. ಸಾವಿರ ಸಂಶಯಗಳು (ಸಾವಿರ ಪ್ರಶ್ನೆಗಳು). ಇದ್ದರೂ ಸರಿ, ಅವುಗಳಿಗೆ ನಮ್ಮ ಊರಿನಲ್ಲಿಯೇ ಉತ್ತರ ದೊರೆಯುತ್ತದೆ. ಅಷ್ಟೇತಕ್ಕೆ? ನಿನ್ನ ಪ್ರಶ್ನೆಯಲ್ಲಿ ಸಾವಿರಕಣ್ಣುಗಳ ಪ್ರಾಣಿ ಯಾವುದು ಎಂದು ಇದೆ. ಸಾವಿರ ಪ್ರಶ್ನೆಗಳಿಗಾದರೂ ಉತ್ತರ ಕೊಡುವ ಜ್ಞಾನವೇ ಸಾವಿರಕಣ್ಣುಗಳ ಪ್ರಾಣಿ. ಜ್ಞಾನಕ್ಕೆ ಎಲ್ಲಾಕಡೆ ದೃಷ್ಠಿ ಇರುತ್ತದೆ. ಸಾವಿರ ಸಂಶಯಗಳಿಗಾದರೂ ಒಂದೇಏಟಿಗೆ ಮುರಿಯುವ ಶಕ್ತಿ, ಒಂದು ಜ್ಞಾನಕ್ಕೇ ಇದೆ. ಆದ್ದರಿಂದ ಜ್ಞಾನ ಸಾವಿರಕಣ್ಣುಗಳ ಪ್ರಾಣಿಯಂತೆ ಏನನ್ನಾದರೂ ಬೇಟೆಯಾಡುತ್ತದೆಂದು, ಯಾವುದಕ್ಕಾದರೂ ಉತ್ತರ ಹೇಳುವಂತಹ ಜ್ಞಾನವನ್ನು ಕುರಿತು ಹೇಳಿದ್ದಾರೆ. ನಿನ್ನ ಪ್ರಶ್ನೆಗೆ ನಮ್ಮ ಊರು ಬಾರದಮುನ್ನವೇ ಉತ್ತರ ಬಂದಿದೆ. ಅದೇ ಜ್ಞಾನವೊಂದರ ಶಕ್ತಿ" ನೋಡಿದೆಯಾ ಎಂದನು. ಅಷ್ಟು ಸುಲಭವಾಗಿ ಉತ್ತರ ದೊರೆಯುತ್ತದೆಂದು ಅಂದುಕೊಳ್ಳದ ಗಾಡಿಯವನು, ಮುದುಕನನ್ನು ಊರಿನಲ್ಲಿ ಬಿಟ್ಟು, ಆ ಮುದಕನನ್ನೇ ಗುರುವಾಗಿ ಹೇಳಿಕೊಳ್ಳುತ್ತಾ ತನ್ನ ಊರಿಗೆ ಹೊರಟುಹೋದನು.

**ಮತಕ್ಕಾಗಿ ಮರಣಿಸಿದರೆ ಸ್ವರ್ಗಕ್ಕೆ ಹೋಗುತ್ತೀಯಾ ಎನ್ನುತ್ತಾನೆ.**
**ಆದರೆ ನೀನು ಹೋಗುವುದು ನರಕಕ್ಕೇ.**

## 19. ರೆಕ್ಕೆಗಳು ಮುಚ್ಚದ ಪಕ್ಷಿ ಯಾವುದು?

ಭೂಮಿ ಮೇಲೆ ರೆಕ್ಕೆಗಳು ಮುಚ್ಚದ ಚಿಟ್ಟೆ ಇದೆ ಆದರೆ, ಪಕ್ಷಿಯಿಲ್ಲ. ರೆಕ್ಕೆಗಳನ್ನು ಮುಚ್ಚದ ಪಕ್ಷಿ ಆಧ್ಯಾತ್ಮಿಕದಲ್ಲಿ ಇದೆ. ಅದೇನೊ ನನಗೆ ತಿಳಿದಿದೆ. ನಿಮಗೆ ತಿಳಿದಿಲ್ಲ ಆದ್ದರಿಂದ ಅದನ್ನು ನಿಮಗೆ ತಿಳಿಸುವ ಮುನ್ನ ಸ್ವಲ್ಪ ಸಮಾಚಾರವನ್ನು ಹೇಳಿಕೊಳ್ಳೋಣ. ಒಬ್ಬ ಮನುಷ್ಯ ಜನ್ಮಿಸಿದಾಗ ಆ ಮನುಷ್ಯ ಶರೀರದೊಳಗೆ ಆತ್ಮ, ಜೀವಾತ್ಮ ಎನ್ನುವ ಎರಡು ಆತ್ಮಗಳು ಬಂದು ಸೇರುತ್ತಿವೆ. ಜೀವಾತ್ಮ ಎನ್ನುವುದು ಕರ್ಮದಿಂದ ಬಂದಿಸಲ್ಪಟ್ಟಿದ್ದು, ಆತ್ಮ ಎನ್ನುವುದು ಜೀವಾತ್ಮವನ್ನು ಕರ್ಮಾನುಸಾರ ಆಡಿಸುವುದಕ್ಕೆ ಜೀವಾತ್ಮಗೆ ಜತೆಮಾಡಲ್ಪಟ್ಟಿದೆ. ಪ್ರಾರಬ್ಧಕರ್ಮ ಮುಗಿದುಹೋದಾಗ ಆತ್ಮ, ಜೀವಿಯನ್ನು ಹಿಂದಿಟ್ಟುಕೊಂಡು ಹಳೆ ಶರೀರವನ್ನು ಬಿಟ್ಟುಹೋಗಿ ಹೊಸಶರೀರವನ್ನು ಸೇರುತ್ತಿದೆ. ಆ ವಿಧವಾಗಿ ಶಿಶು ಶರೀರದಲ್ಲಿ ಸೇರಿದಾಗಿನಿಂದ ಶಿಶು ಶರೀರದಲ್ಲಿ ಕೆಲಸ ಮಾಡುತ್ತಾ, ಶ್ವಾಸ ಆಡಿಸುತ್ತಾ, ಗುಂಡಿಗೆಯನ್ನು ಕದಲಿಸುತ್ತಾ, ಉಳಿದ ಎಲ್ಲಾ ಕಾರ್ಯಗಳನ್ನು ಆತ್ಮ ಮಾಡಿಡುತ್ತಿದೆ. ಜೀವಾತ್ಮ ಮಾತ್ರ ತಲೆಯಲ್ಲಿ ಗುಣಚಕ್ರದಲ್ಲಿ ಸುಖದುಃಖ ಅನುಭವಗಳನ್ನು ಮಾತ್ರ ಅನುಭವಿಸುತ್ತಾ, ಉಳಿದ ಯಾವಕೆಲಸವನ್ನು ಶರೀರದಲ್ಲಿ ಮಾಡದಂತಿದೆ. ಶರೀರದೊಳಗೆ ಕೆಲಸಗಳನ್ನಾಗಲಿ, ಶರೀರದ ಹೊರಗಿನ ಕೆಲಸಗಳನ್ನಾಗಲಿ, ಪ್ರತಿ ಚಿಕ್ಕ ಕೆಲಸವನ್ನು, ದೊಡ್ಡ ಕೆಲಸವನ್ನು ಆತ್ಮವೇ ಮಾಡುತ್ತಿದೆ. ಒಂದುಕ್ಷಣ ಕೂಡಾ ಆತ್ಮ ಸುಮ್ಮನಿರದೆ ಕೆಲಸಗಳನ್ನು ಮಾಡುತ್ತಿದೆ. ಮನುಷ್ಯ ಎಚ್ಚರದಲ್ಲಿರುವಾಗಾಗಲಿ, ನಿದ್ರೆಯಲ್ಲಿ ಇರುವಾಗಾಗಲಿ, ಸ್ವಪ್ನದಲ್ಲಿರುವಾಗಾಗಲಿ ಆತ್ಮ ಕೆಲಸ ಮಾಡುತ್ತಿರುವಾಗ, ಮನುಷ್ಯ ಸಜೀವವಾಗಿ ಇದ್ದಾನೆ. ಮನುಷ್ಯನ ಜೀವನದಲ್ಲಾಗಲಿ, ಮನುಷ್ಯ ಮರಣಿಸುವಾಗಾಗಲಿ, ಮನುಷ್ಯ ಜನ್ಮಿಸುವಾಗಾಗಲಿ ಆತ್ಮ ಅಹರ್ನಿಶೆಗಳು ಕೆಲಸ ಮಾಡುತ್ತಿದೆ. ಆತ್ಮ ಕೆಲಸ ಮಾಡದ ಕ್ಷಣ ಇದು ಎಂದು ಯಾರೂ ಹೇಳಲಾರರು. ಆದ್ದರಿಂದ ಜೀವಾತ್ಮವನ್ನು, ಆತ್ಮವನ್ನು ಶರೀರವೆನ್ನುವ ಪಂಜರದಲ್ಲಿರುವ ಜೋಡಿ ಪಕ್ಷಿಗಳೆಂದು ಹೇಳುತ್ತಿರುತ್ತಾರೆ. ಪಂಜರದಲ್ಲಿ ಜೀವಿಯೆನ್ನುವ ಒಂದು ಪಕ್ಷಿ ಸುಮ್ಮನೆ ಇರುವಾಗ, ಆತ್ಮ

ಯೆನ್ನುವ ಪಕ್ಷಿ ರೆಕ್ಕೆಗಳನ್ನು ಮುಚ್ಚದೆ ಶರೀರ ಪಂಜರದಲ್ಲಿ ಎಗರುತ್ತಾ ಕೆಲಸ ಮಾಡುತ್ತಿದೆಯೆಂದು ಹೇಳಬಹುದು. ಈ ಒಗಟಿನಲ್ಲಿ ರೆಕ್ಕೆಗಳು ಮುಚ್ಚದ ಪಕ್ಷಿ ಯಾವುದೆಂದರೇ ಆತ್ಮ ಎಂದು ಹೇಳಬಹುದು.

**ಮತವು ಮನುಷ್ಯನನ್ನು ಸಂಕುಚಿತ ಮಾಡುತ್ತದೆ. ನೀನು ಬೇರೆ, ನಾನು ಬೇರೆ ಎನ್ನುವ ಭಾವನೆಯನ್ನು ಕಲ್ಪಿಸುತ್ತದೆ.**

## 20. ಕಣ್ಣಿಲ್ಲದ ಕಣ್ಣು ಯಾವುದು?

ಕಣ್ಣಿಲ್ಲದ ಕಣ್ಣು ನವಿಲುಗರಿಕಣ್ಣು ಎಂದು ಪ್ರಪಂಚ ರೀತಿಯಲ್ಲಿ ಕೆಲವರು ಉತ್ತರ ಹೇಳಬಹುದು. ಆದರೆ ಜ್ಞಾನರೀತಿಯಲ್ಲಿ 'ಕಣ್ಣಿಲ್ಲದ ಕಣ್ಣು' ಮನುಷ್ಯನಿಗೆ ಒಂದು ಇದೆ. ಮುಖದಲ್ಲಿರುವ ಎರಡು ಕಣ್ಣುಗಳಿಗೆ ಪ್ರಪಂಚ ಕಾಣಿಸುತ್ತದೆ. ಪ್ರಪಂಚವಲ್ಲದಂತಹ ಪರಮಾತ್ಮ ಸಂಬಂಧವಾದುದು ಏನು ತಿಳಿಯಬೇಕೆಂದರೂ ಮನುಷ್ಯನಿಗೆ ಜ್ಞಾನನೇತ್ರ ಅಗತ್ಯ. ಜ್ಞಾನನೇತ್ರ ಜ್ಞಾನ ತಿಳಿಯದವರಿಗು ಕೂಡಾ ಇದೆ. ಆದರೇ ಜ್ಞಾನ ತಿಳಿಯದವರಿಗೆ ಜ್ಞಾನನೇತ್ರ ಮುಚ್ಚಿಕೊಂಡಿರುತ್ತದೆ. ಜ್ಞಾನವು ಮನುಷ್ಯರಿಗೆ ಎಷ್ಟು ತಿಳಿಯಲ್ಪಟ್ಟರೆ, ಜ್ಞಾನ ನೇತ್ರ ಅಷ್ಟು ತೆರೆಯಲ್ಪಡುತ್ತದೆ. ಜ್ಞಾನನೇತ್ರ ತೆರೆಯಲ್ಪಟ್ಟರೂ, ಅದಕ್ಕೆ ದೃಷ್ಠಿಯನ್ನು ದೇವರೇ ಕೊಡಬೇಕು. ಜ್ಞಾನನೇತ್ರಕ್ಕೆ ದೃಷ್ಠಿ ಉಂಟಾದಂತೆಲ್ಲ ಜ್ಞಾನ ರಹಸ್ಯಗಳೆಲ್ಲವೂ ಮನುಷ್ಯನಿಗೆ ತಿಳಿಯಲ್ಪಡುತ್ತವೆ. ಜ್ಞಾನನೇತ್ರ ಸೂಕ್ಷ್ಮವಾದುದು. ಮೇಲ್ನೋಟಕ್ಕೆ ಕಾಣಿಸುವುದಲ್ಲ. ಜ್ಞಾನನೇತ್ರವು ಸೂಕ್ಷ್ಮವಾದುದು ಆಗಿರುವುದರಿಂದ ಅದಕ್ಕೆ ಸೂಕ್ಷ್ಮವಾದ ಜ್ಞಾನರಹಸ್ಯಗಳು ತಿಳಿಯಲ್ಪಡುತ್ತವೆ. ಭಗವದ್ಗೀತೆಯಲ್ಲಿ ಕೃಷ್ಣನು ಅರ್ಜುನನಿಗೆ ಜ್ಞಾನದೃಷ್ಟಿ ಕೊಟ್ಟಿರುವುದರಿಂದ, ಅರ್ಜುನನು ವಿಶ್ವರೂಪವನ್ನು ನೋಡಲ್ಪಟ್ಟಿದ್ದಾನೆ. ಆದ್ದರಿಂದ ಒಗಟಿನಲ್ಲಿ ಉತ್ತರವಾಗಿ, ಕಣ್ಣಿಲ್ಲದಕಣ್ಣು ಜ್ಞಾನನೇತ್ರವೆಂದು ಹೇಳಬಹುದು.

**ಒಂದು ಬರಹ ಎಷ್ಟುಜನರನ್ನಾದರೂ ಬದಲಿಸಬಲ್ಲದು. ಆದ್ದರಿಂದ ಒಳ್ಳೆಯದನ್ನು ಬರೆಯಿರಿ.**

## 21. ತಾಯಿ ದೈವ, ಮಗಳು ಕವಡೆ, ಮಗಳು ಏನು? ತಾಯಿ ಏನು?

ಶರೀರದಲ್ಲಿನ ಜೀವಿಗೆ ತಾಯಂದಿರು ಇಬ್ಬರು ಇದ್ದಾರೆ. ಒಂದೇ ದೇವರೇ ಭಗವಂತನಾಗಿ ಮನುಷ್ಯನೊಂದಿಗೆ ಸಂಬಂಧ ಇಟ್ಟುಕೊಂಡಂತೆ, ಒಂದೇ ಪ್ರಕೃತಿಯೇ ಮಾಯೆಯಾಗಿ ಮನುಷ್ಯನೊಂದಿಗೆ ಸಂಬಂಧ ಇಟ್ಟುಕೊಂಡಿದೆ. ದೇವರು ಮನುಷ್ಯನಿಗೆ ತಂದೆಯಾಗಿದ್ದು, ಭಗವಂತನು ತಂದೆಯಂತಹವನು. ಹಾಗೆಯೇ ಮನುಷ್ಯನಿಗೆ ಪ್ರಕೃತಿ ತಾಯಿಯಾಗಿದ್ದು, ಮಾಯೆ ತಾಯಿಯಂತವಳು. ಒಂದು ವಿಧವಾಗಿ ಭಗವಂತನನ್ನು ತಂದೆಯೆಂದು ಹೇಳಿದರೂ ತಪ್ಪಿಲ್ಲ. ಅದೇ ವಿಧವಾಗಿ ಮಾಯೆಯನ್ನು ತಾಯಿಯಾಗಿ ಹೇಳಿದರೂ ತಪ್ಪಿಲ್ಲ. ಮಾಯೆ ಎನ್ನುವುದು ಮನುಷ್ಯನ ಶರೀರದಲ್ಲಿ ಗುಣಚಕ್ರದಲ್ಲಿ, ಗುಣಗಳ ರೂಪದಲ್ಲಿದೆ. ಗುಣಚಕ್ರದಲ್ಲಿನ ಮಾಯೆಗೆ ಅಲ್ಲಿಯೇ ಕೆಲವು ಗುಣಗಳು ಒಳ್ಳೆಯವು ಇವೆ. ಉದಾಹರಣೆಗೆ ಮಾಯೆಯಲ್ಲಿರುವ ಗುಣಗಳಲ್ಲಿ ಪ್ರೇಮ ಎನ್ನುವ ಗುಣ ಒಂದು ಕವಡೆಯಂತೆ ಇದೆ. ಪ್ರೇಮ ಎಷ್ಟೋ ದೊಡ್ಡ ಗುಣವಾಗಿ ಎಲ್ಲರಿಂದ ಹೇಳಲ್ಪಡುತ್ತಿದೆ. ಪ್ರೇಮ ಎನ್ನುವ ಗುಣವನ್ನು ಎಲ್ಲರೂ ಪ್ರಶಂಸಿಸಿ ಹೇಳಿದಂತೆ, ಉಳಿದ ಯಾವ ಗುಣವನ್ನು ಯಾರೂ ಹೇಳಲಿಲ್ಲ. ಕೊನೆಗೆ ಕೆಲವರು ಸ್ವಾಮೀಜಿಗಳು, ಬಾಬಾರವರು ಎಲ್ಲರೂ ಪ್ರೇಮವೇ ದೇವರೆಂದು ಕೂಡಾ ಹೇಳಿದ್ದಾರೆ. ಮಾಯೆಯನ್ನು ಬಹಳಜನ ದೈವವಾಗಿ ವರ್ಣಿಸಿದವರೇ, ಮಾಯೆಯಲ್ಲಿ ಭಾಗವಾದ ಪ್ರೇಮ ಗುಣವನ್ನು ದೇವರಾಗಿ ವರ್ಣಿಸಿ ಹೇಳುವುದು ವಿಚಿತ್ರ ಅಲ್ಲವೇ! ಅದೇ ವಿಧವಾಗಿ ಕೆಲವರು ಮಾಯೆಯನ್ನು ದೈವವಾಗಿ ವರ್ಣಿಸಿದವರೇ, ಅದರಲ್ಲಿನ ಪ್ರೇಮ ಗುಣವನ್ನು ಕವಡೆಯಾಗಿ ವರ್ಣಿಸಿದ್ದಾರೆ. ಈ ಒಗಟಿನಲ್ಲಿ ತಾಯಿ ಮಾಯೆಯೆಂದು, ಮಗಳು ಪ್ರೇಮ ಎಂದು ಸುಲಭವಾಗಿ ತಿಳಿದುಹೋಗುತ್ತಿದೆ.

**ಒಂದು ಮಾತು ಎಷ್ಟು ಜನರನ್ನಾದರೂ ಸ್ಪಂದಿಸುವಂತೆ ಮಾಡುತ್ತದೆ. ಆದ್ದರಿಂದ ಒಳ್ಳೆಯದಾಗಿ ಮಾತನಾಡು.**

## 22. ತಲೆ ಬಾಲ ಇದೆ, ನಾಲಿಗೆಯೇ ಇಲ್ಲ. ಹಿಡಿದು ನೋಡಿದರೆ ಪ್ರಾಣವು ಇಲ್ಲ. ಏನು?

ಇದಕ್ಕೆ ಪ್ರಪಂಚ ರೀತಿಯಲ್ಲಿ ಉತ್ತರ ಹಾವಿನ ಪೊರೆಯೆಂದು ಬಹಳಜನ ಹೇಳುತ್ತಿದ್ದಾರೆ. ಇದು ಪ್ರಪಂಚ ರೀತಿಯಲ್ಲಿ ಸರಿಯಾದ ಉತ್ತರವೇ, ಆದರೇ ಪರಮಾತ್ಮ ಜ್ಞಾನದ ಪ್ರಕಾರ ಅರ್ಥವನ್ನು ನೋಡಬೇಕಾಗಿದೆ. ಈ ಒಗಟಿನಲ್ಲಿ ತಲೆಯು ಇದೆ, ಬಾಲವಿದೆ ಎಂದು ಇದೆ. ಆದ್ದರಿಂದ ಇದು ಇಂಥಾದ್ದೆಂದು ಗುರುತಿಸಲ್ಪಟ್ಟ ಆಕಾರ ಇದೆಯೆಂದು ಅರ್ಥವಾಗುತ್ತಿದೆ. ನಾಲಿಗೆ ಇಲ್ಲವೆಂದು ಹೇಳುವುದರಿಂದ ಅದಕ್ಕೆ ಯಾವ ರುಚಿ ತಿಳಿಯುವುದಿಲ್ಲವೆಂದು ಅರ್ಥವಾಗುತ್ತಿದೆ. ಅಷ್ಟೇಅಲ್ಲದೆ ಪ್ರಾಣ ಇಲ್ಲದಿರುವುದೆಂದು ಬರೆದಿದ್ದಾರೆ. ಆಕಾರವಿದ್ದು ಪ್ರಾಣ ಇಲ್ಲದಿರುವುದು, ನಾಲಿಗೆ ಇಲ್ಲದಿರುವುದು ಏನಾಗಿರುತ್ತದೆಂದು ಬುದ್ಧಿ ಎಷ್ಟಾಗಿ ಆಲೋಚಿಸಿದರೂ ಅದಕ್ಕೆ ಉತ್ತರ ದೊರೆಯಲಿಲ್ಲ. ಕೊನೆಗೆ ಆತ್ಮ ತಿಳಿಸಿದ ಯೋಚನೆಯಿಂದ ಉತ್ತರ ದೊರೆತಿದೆ. ಅದು ಏನೆಂದರೇ! ನಮ್ಮ ಶರೀರವೆಲ್ಲಾ ಪ್ರಾಣವಿದೆ. ನಾವು ಊಸಿರಾಡುವ ಪ್ರಾಣವಾಯುವು ಶ್ವಾಸಕೋಶಗಳಲ್ಲಿ ರಕ್ತದೊಂದಿಗೆ ಬೆರೆತು, ಗುಂಡಿಗೆ ಮುಖಾಂತರ ಶರೀರವೆಲ್ಲವೂ ಹೋಗುತ್ತಿದೆ. ಈ ವಿಧವಾಗಿ ನಮ್ಮ ಶರೀರವೆಲ್ಲಾ ಪ್ರಾಣವಿದೆಯೆಂದು ಹೇಳಬಹುದು. ಆದರೇ ಪ್ರಾಣವಾಯುವು ಹೋಗಬಾರದೆಂದು ನಿಶಿದ್ಧಪ್ರಾಂತ ಒಂದಿದೆ. ದೇಶರಕ್ಷಣೆ ನಿಮಿತ್ತ ಮಿಲಿಟರಿ, ಯಾರೂ ಹೋಗಬಾರದೆಂದು ನಿಶಿದ್ಧಪ್ರಾಂತಗಳನ್ನು ಏರ್ಪಡಿಸಿರುತ್ತದೆ. ಅಲ್ಲಿ ಮಿಲಿಟರಿ ಒಂದರ ರಹಸ್ಯ ಕಾರ್ಯಕಲಾಪಗಳಿರುತ್ತವೆ. ಆದ್ದರಿಂದ ಅದು ನಿಶೇಧಿತ ಪ್ರಾಂತವಾಗಿದೆ. ರಕ್ಷಣಾ ಕಾರ್ಯಕಲಾಪಗಳ ನಿಮಿತ್ತ ದೇಶದಲ್ಲಿಯೇ ಒಂದು ಪ್ರಾಂತ ನಿಶಿದ್ಧ ಪ್ರಾಂತವಾಗಿ, ಯಾರೂ ಪ್ರವೇಶಿಸದ ಪ್ರಾಂತವಾಗಿ ಗುರುತಿಸಲ್ಪಟ್ಟಂತೆ, ನಮ್ಮ ಶರೀರದಲ್ಲಿ ತಲೆಯಲ್ಲಿ ಸೂಕ್ಷ್ಮವಾಗಿರುವ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳ ಸಮುದಾಯವಿರುವ ಸ್ಥಳದೊಳಗೆ ಪ್ರಾಣವಾಯು ಕೂಡಾ ಹೋಗುವುದಿಲ್ಲ. ಈ ನಾಲ್ಕು ಚಕ್ರಗಳು, ಮನುಷ್ಯನ ಜೀವನದ ರಹಸ್ಯವನ್ನು ಹೊಂದಿವೆ. ಮಿಲಿಟರಿ ರಹಸ್ಯವೆಲ್ಲಾ ಒಂದುಕಡೆ ಇರುವಂತೆ, ಮನುಷ್ಯನ ಜೀವನದ ರಹಸ್ಯವೆಲ್ಲಾ ನಾಲ್ಕು ಚಕ್ರಗಳಲ್ಲಿಯೇ ಇದೆ.

ಅವು ಕೆಲವುಗಳಿಗೆ ನಿಶೇಧಿತ ಪ್ರಾಂತವಾದ್ದರಿಂದ ಅಲ್ಲಿ ಪ್ರಾಣ ಇರುವುದಿಲ್ಲ. ಅಲ್ಲಿ ಜೀವಿಯು, ಜೀವಿಗೆ ಸಂಬಂಧಿಸಿದ ಚರಿತ್ರೆ ಮತ್ತು ಭವಿಷ್ಯತ್ತು ಎರಡು ಇರುತ್ತವೆ. ಶರೀರವೆಲ್ಲ ಹೋಗುತ್ತಿರುವ ಪ್ರಾಣ, ಜೀವಿ ಇರುವ ನಾಲ್ಕು ಚಕ್ರದೊಳಗೆ ಹೋಗುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಅಲ್ಲಿರುವ ಜೀವಿಗೆ ಪ್ರಾಣವಿಲ್ಲ ಎಂದು ಈಗ ಅರ್ಥವಾಗಿದೆ. ಜೀವಿಯು ಪ್ರಾಣ ಇಲ್ಲದವನೆಂದು, ಈಗ ನಾವು ಧೈರ್ಯವಾಗಿ ಹೇಳಬಹುದು.

ಜೀವಿಗೆ ಸ್ಥೂಲ ಆಕಾರ ಇಲ್ಲದಿದ್ದರೂ, ಸೂಕ್ಷ್ಮ ಆಕಾರವಿದೆ. ನಂತರ ಪುಟದಲ್ಲಿ ಜೀವಿಯ ಚಿತ್ರವನ್ನು ನೋಡಬಹುದು.

ಜೀವಿಯ ಆಕಾರ ಮೂರು ಪೊರೆಗಳಿಂದ ಕೂಡಿಕೊಂಡು ಮಧ್ಯದಲ್ಲಿ ಖಾಲಿ ಸ್ಥಳವಾಗಿದೆ. ಮೂರು ಪೊರೆಗಳು ಖಾಲಿ ಸ್ಥಳವನ್ನು ಸುತ್ತಿರುವುದರಿಂದ, ಮಧ್ಯದಲ್ಲಿರುವ ಜೀವಿಗೆ ದುಂಡನೆಯ ಆಕಾರ ಏರ್ಪಟ್ಟಿದೆ. ಜೀವಿಗೆ ತಲೆ, ಮಧ್ಯದಲ್ಲಿನ ಶೂನ್ಯವೆಂದೂ, ಬಾಲದ ಕೊನೆಯಲ್ಲಿ ಅಹಮ್‌ನ ಪೊರೆಯೆಂದು ತಿಳಿಯುತ್ತಿದೆ. ಆದ್ದರಿಂದ ಜೀವಿಗೆ ತಲೆಯೂ, ಬಾಲವೂ ಎರಡೂ ಇವೆಯೆಂದು ಹೇಳಬಹುದು.

ಜೀವಿಯು ತನ್ನಹತ್ತಿರಕ್ಕೆ ಬಂದಿರುವ ಕಷ್ಟಸುಖಗಳ ಅನುಭೂತಿಗಳನ್ನು ಅನುಭವಿಸುವವನೇ ಹೊರತು, ತಾನು ಸ್ವತಃವಾಗಿ ಯಾವುದನ್ನು ಗ್ರಹಿಸಲಾರನು. ತನಗೆ ಹತ್ತಿರವಾಗಿರುವ ಬುದ್ಧಿ, ಹೊರಗಿನ ಇಂದ್ರಿಯಗಳಿಂದ ಮನಸ್ಸು ತಂದಿರುವ



ಸಮಾಚಾರವನ್ನು ತೆಗೆದುಕೊಂಡು, ಇದು ಇಂತಹ ಸುಖವೆಂದೊ ಅಥವಾ ಇಂತಹ ಕಷ್ಟವೆಂದೊ ಹೇಳಿ, ಜೀವಿಗೆ ಒದಗಿಸುವುದರಿಂದ ಜೀವಿಯು ಅದನ್ನು ಅನುಭವಿಸುತ್ತಿದ್ದಾನೆ. ಜೀವಿಗೆ ಯಾವುದನ್ನು ಸ್ವತಃವಾಗಿ ತಿಳಿದುಕೊಳ್ಳುವ ಶಕ್ತಿಯಿಲ್ಲ. ಜೀವಿಯು ದೃಷ್ಠಿಯಿಲ್ಲದವನು, ಶ್ರವಣಶಕ್ತಿ ಇಲ್ಲದವನು, ಹಾಗೇ ಯಾವ ಇಂದ್ರಿಯ ಜ್ಞಾನ ಇಲ್ಲದವನು. ಆದ್ದರಿಂದ ಜೀವಿಯು ಏನನ್ನು ಸ್ವತಃವಾಗಿ ರುಚಿ ನೋಡಲಾರನು. ಬುದ್ಧಿ ಹೇಳಿರುವುದನ್ನು ಅನುಸರಿಸಿ ಜೀವಿಯು ತಿಳಿಯುತ್ತಿರುತ್ತಾನೆ. ಈಗ ನಮಗೆ ಬೇಕಾದ ಸಮಾಚಾರ, ಸಮಾಧಾನ ಪೂರ್ತಿ ಯಾಗಿ ತಿಳಿದುಹೋಗಿದೆ. ಒಗಟಿನಲ್ಲಿ ತಲೆ, ಬಾಲ ಇರುವವನು ಯಾರು ಎನ್ನುವುದಕ್ಕೆ, ಆಕಾರ ಇರುವವನು ಜೀವಿಯೆಂದು, ಜೀವಿಗೆ ತಲೆ, ಬಾಲ ಎರಡೂ ಇವೆಯೆಂದು ಸಮಧಾನ ಹೇಳಬಹುದು. ಹಾಗೇ ಬುದ್ಧಿ ಹೇಳದೆ ಜೀವಿಗೆ ಏನು ತಿಳಿಯುವುದಿಲ್ಲ. ಅಷ್ಟೇ ಅಲ್ಲದೆ ಜೀವಿಯು ಸ್ವತಃವಾಗಿ ಉತ್ತರ ಹೇಳುವವನಲ್ಲ. ಗುಣಗಳಿಂದ ಗ್ರಹಿಸಿದ ವಿಷಯವನ್ನು ಬುದ್ಧಿಯೇ ಹೇಳುತ್ತಿದೆ ಹೊರತು, ಜೀವಿಯು ಪುನಃ ಏನು ಹೇಳುತ್ತಿಲ್ಲ. ಆದ್ದರಿಂದ ಜೀವಿಯನ್ನು ನಾಲಿಗೆ ಇಲ್ಲದವನೆಂದು ಹೇಳಬಹುದು. ಗುಣಚಕ್ರದವರೆಗು ಪ್ರಾಣವಿಲ್ಲ ಆದ್ದರಿಂದ, ಜೀವಿಯು ಪ್ರಾಣ ಇಲ್ಲದವನೆಂದು ಕೂಡಾ ಹೇಳಬಹುದು. ಈಗ ಒಗಟಿನ ಪ್ರಶ್ನೆಗೆ ಪೂರ್ತಿಯಾಗಿ ಜೀವಿಯೆಂದು ಉತ್ತರ ಬಂದಿದೆ. ಈ ಒಗಟು ಪೂರ್ತಿಯಾಗಿ ಜೀವಿಯ ಸಮಾಚಾರ ಜ್ಞಾನವನ್ನು ತಿಳಿಸುತ್ತಿದೆ.

**ಒಬ್ಬನು ಒಂದುಸಲ ಹುಟ್ಟಿದರೂ, ಶಾಶ್ವತವಾಗಿ ಎಲ್ಲರಿಗೂ ಜ್ಞಾಪಕ ಇರುತ್ತಾನೆ.**

## 23. ನಡುಮನೆಯಲ್ಲಿ ನಾಲ್ಕುಜನ ಕಳ್ಳರಿದ್ದಾರೆ. ಯಾರು ಅವರು?

ನಮ್ಮ ಶರೀರವನ್ನು ಮನೆಯಾಗಿ ಹೋಲಿಸಿಕೊಂಡರೆ, ಜೀವಿ ಇರುವುದು ತಲೆಭಾಗದಲ್ಲಿ. ತಲೆಭಾಗದಲ್ಲಿ ಪೂರ್ತಿ ಮಧ್ಯದಲ್ಲಿ ನಾಲ್ಕು ಚಕ್ರಗಳಿವೆ. ಅದರಲ್ಲಿ ಜೀವಿಯು ಇದ್ದಾನೆ. ಆದ್ದರಿಂದ ಭೃಕುಟಿಗೆ ಮಧ್ಯದಲ್ಲಿ, ಉಪಜಿಹ್ವೆಗೆ ಮೇಲ್ಭಾಗದಲ್ಲಿ ಜೀವಿಯು ಇದ್ದಾನೆಂದು ಕೂಡಾ ನಮ್ಮ ಹಿರಿಯರು ಒಂದು ಪದ್ಯದಲ್ಲಿ ಹೇಳಿದ್ದಾರೆ. ಭೃಕುಟಿಗೆ ಮಧ್ಯದಲ್ಲಿ ಎಂದು ನೋಡಿದರೆ, ತಲೆ ಮಧ್ಯಭಾಗದಲ್ಲಿ

ಎಂದು ತಿಳಿಯುತ್ತಿದೆ. ತಲೆ ಮಧ್ಯಭಾಗದಲ್ಲಿನ ಗುಣಚಕ್ರದಲ್ಲಿ ಜೀವಿ ಇರುವಾಗ, ಜೀವಿಯನ್ನು ಆಶ್ರಯಿಸಿಕೊಂಡು ಬುದ್ಧಿ, ಚಿತ್ತ, ಅಹಮ್ ಇವೆ. ಆಗ ಜೀವಿಯೊಂದಿಗೆ ಕೂಡಾ ಒಟ್ಟು ನಾಲ್ಕು, ತಲೆ ಮಧ್ಯದಲ್ಲಿವೆ. ಬುದ್ಧಿಯಾಗಲಿ, ಅಹಮ್ ಆಗಲಿ, ಚಿತ್ತವಾಗಲಿ, ಜೀವಿಯಾಗಲಿ ತಲೆ ಮಧ್ಯದಲ್ಲಿರುವುದರಿಂದ, ನಡುಮನೆಯಲ್ಲಿ ನಾಲ್ಕುಜನ ಎಂದು ಹೇಳುವುದು ನಡೆದಿದೆ. ಈ ನಾಲ್ಕುಜನರು ಯಾರಿಗೂ ತಿಳಿಯದಂತೆ ಇರುವುದರಿಂದ ಇವರನ್ನು ನಾಲ್ವರು ಕಳ್ಳರೆಂದು ಹೇಳುವುದು ನಡೆದಿದೆ. ಈಗ ಒಗಟಿಗೆ ಪೂರ್ತಿ ಉತ್ತರ ಬಂದಿದೆ.

**ಕೀರ್ತಿಗಾಗಿ ಪರದಾಡಬೇಡ. ಮುಕ್ತಿಗಾಗಿ ಚಿಂತಿಸು.**

## 24. ಹಸಿರು ಮನೆಯಲ್ಲಿ ಹುಟ್ಟಿದ್ದಾನೆ, ಹತ್ತು ಜನರ ಕೈಯಲ್ಲಿ ಬಿದ್ದಿದ್ದಾನೆ. ಹತ್ತು ವಿಧಗಳಾಗಿ ಬದಲಾಗಿದ್ದಾನೆ, ಮಾತನಾಡದೆ ಇರುತ್ತಾನೆ. ಯಾರು?

ಹಸಿರು (ಹಸಿ) ಹುಲ್ಲು, ಒಣಗಿದ ಹುಲ್ಲು ಎಂದು ಎರಡು ವಿಧಗಳು ಇವೆ. ಹಸಿರು ಎಂದರೇ ಹಸಿಹುಲ್ಲು ಎಂದು ಕೂಡಾ ಹೇಳಬಹುದು. ತುಂಬಿದ ಮನೆಯಲ್ಲಿ, ಹಸಿರು ಮನೆಯಲ್ಲಿ ಎಂದು ಕೂಡಾ ಅರ್ಥಬರುತ್ತದೆ. ಹಸಿರು ಮನೆ ಮನುಷ್ಯನ ಶರೀರವೇಯೆಂದು ತಿಳಿದುಕೊಳ್ಳಬೇಕು. ಶರೀರ ಯಾವಾಗಾದರೂ ಹಸಿದಾಗಿಯೇ ಇರುತ್ತದೆ. ಶಿಶುಶರೀರ ಕೂಡಾ ಹಸಿ ಶರೀರವೇ. ಶಿಶುಶರೀರದಲ್ಲಿ ಪ್ರವೇಶಿಸಿ ಹುಟ್ಟಿದವನು ಜೀವಿಯು. ಆದ್ದರಿಂದ "ಜೀವಿಯನ್ನು ಹಸಿರು ಮನೆಯಲ್ಲಿ ಹುಟ್ಟಿದ್ದಾನೆ" ಎಂದು ಹೇಳಬಹುದು. ಜೀವಿಯು ಶರೀರವನ್ನು ಧರಿಸಿ ಹುಟ್ಟಿದ ನಂತರ ಅನೇಕ ವಿಧಗಳ ಪಾಪಪುಣ್ಯಗಳನ್ನು ಅನುಭವಿಸುತ್ತಾ ಬಂದಿದ್ದಾನೆ. ಒಂದುಸಲ ಪಾಪವನ್ನು ಅನುಭವಿಸುತ್ತಾ ರೋಗದ ಕೈಯಲ್ಲಿ ಬಿದ್ದಿದ್ದಾನೆ. ಅದು ಮುಗಿದುಹೋದ ನಂತರ ಪುಣ್ಯವನ್ನು ಅನುಭವಿಸುವುದಕ್ಕೆ ಅಂದವಾದ ಸ್ತ್ರೀ ಕೈಯಲ್ಲಿ ಬಿದ್ದಿದ್ದಾನೆ. ಈ ವಿಧವಾಗಿ ಜೀವಿಯು ಒಂದುಸಲ ಪಾಪ, ಮತ್ತೊಂದುಸಲ ಪುಣ್ಯವನ್ನು ಅನುಭವಿಸುವುದಕ್ಕೆ ಅನೇಕ ಸಂಘಟನೆಗಳ ಕೈಗಳಲ್ಲಿ ಬಿದ್ದಿದ್ದಾನೆ. ಈ ವಿಧವಾಗಿ ಜೀವನವನ್ನು ಕಳೆಯುತ್ತಿರುವ ಜೀವಿಯು ಕರ್ಮಗಳನ್ನನುಸರಿಸಿ, ಸಂದರ್ಭ

ಗಳನ್ನನುಸರಿಸಿ ಒಂದುಸಲ ತಾಮಸನಾಗಿ ಬದಲಾಗಿದ್ದಾನೆ. ಮತ್ತೊಂದುಸಲ ರಾಜಸನಾಗಿ ಬದಲಾಗಿದ್ದಾನೆ. ಹಾಗೇ ಕೆಲವು ಸಮಯಗಳಲ್ಲಿ ಸಾತ್ತ್ವಿಕನಾಗಿ ಕೂಡಾ ಬದಲಾಗಿದ್ದಾನೆ. ಹೀಗೆ ಜೀವನದಲ್ಲಿ ಎಷ್ಟೋಸಲ, ಹತ್ತುವಿಧಗಳ ಗುಣಗಳೊಳಗೆ ಬದಲಾಗಿದ್ದಾನೆ. ಒಂದುಸಲ ರಾಜಸ ಗುಣದಲ್ಲಿನ ಕ್ರೋಧ ಎನ್ನುವ ಗುಣವನ್ನು ತಗಲಿಕೊಳ್ಳುವುದರಿಂದ ಕೋಪಿಷ್ಠಿಯಾಗಿ ಬದಲಾಗಿ ಹೋಗಿದ್ದಾನೆ. ಅದೇ ರಾಜಸ ಭಾಗದಲ್ಲಿ ಕಾಮ (ಆಸೆ) ಎನ್ನುವ ಗುಣದಿಂದ ತಗಲಿಕೊಳ್ಳುವುದರಿಂದ ಆಸೆಯುಳ್ಳವನಾಗಿ (ಕಾಮಾಂಧನಾಗಿ) ಬದಲಾಗಿ ಹೋಗಿದ್ದಾನೆ. ಈ ವಿಧವಾಗಿ ಜೀವಿಯು ಗುಣಭಾಗಗಳೊಳಗೆ ಹೋಗಿ ತಾಮಸನಾಗಿ, ರಾಜಸನಾಗಿ, ಸಾತ್ತ್ವಿಕನಾಗಿ ಬದಲಾಗುವುದೇ ಅಲ್ಲದೆ, ಆಯಾ ಗುಣ ಭಾಗಗಳಲ್ಲಿನ ಗುಣಗಳಿಂದ ಸೇರಿ ಲೋಭಿಯೆಂದು, ಗರ್ವಿಯೆಂದು, ಕೋಪಿಷ್ಠಿಯೆಂದು, ಅಸೂಯೆಪರನೆಂದು ಹೆಸರುವಾಸಿಯಾಗುತ್ತಿದ್ದಾನೆ.

ಹಸಿರು ಮನೆಯಾಗಿರುವ ಹಸಿ ಶರೀರದಲ್ಲಿ ಹುಟ್ಟಿದ ಜೀವಿಯು, ಪಾಪಪುಣ್ಯಗಳ ಕೈಯ್ಯಲ್ಲಿ ಬಿದ್ದು, ಕಷ್ಟಸುಖಗಳನ್ನು ಅನುಭವಿಸಿದ ಜೀವಿಯು, ಗುಣಗಳಲ್ಲಿ ಅತ್ತ ಇತ್ತ ಬದಲಾಗುತ್ತಾ, ಗುಣಗಳ ಹೆಸರನ್ನು ಪಡೆಯುತ್ತಿರುವ ಜೀವಿಯು ಮೌನವಾಗಿ ಹುಟ್ಟುತ್ತಿದ್ದಾನೆ. ಮೌನವಾಗಿ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಮೌನವಾಗಿ ಗುಣಗಳನ್ನು ಬದಲಾಗುತ್ತಿದ್ದಾನೆ. ಜೀವಿಯು ಮೌನವಾಗಿ ಇರುವವನೇ ಮೌನವಾಗಿ ಏನು ಮಾತನಾಡದ ಜೀವಿಗೆ ಮಾತನಾಡುವುದಕ್ಕೆ ಬಾಯಿಲ್ಲ. ನೋಡುವುದಕ್ಕೆ ಕಣ್ಣಿಲ್ಲ, ಕೇಳುವುದಕ್ಕೆ ಶ್ರವಣಶಕ್ತಿ ಇಲ್ಲ. ಜೀವಿಗೆ ಏನು ಇಲ್ಲವಾದ್ದರಿಂದ, ಯಾವಾಗಲೂ ಜೀವಿಯು ಮೌನ ವಾಗಿಯೇ ಇರುತ್ತಾನೆ. ಏನು ಮಾತನಾಡದ ಜೀವಿಗೆ ಎಲ್ಲವನ್ನು ಹೇಳುವುದು ಬುದ್ಧಿ. ಜೀವಿಗೆ ಪಕ್ಕದಲ್ಲಿಯೇ ಬುದ್ದಿ, ಚಿತ್ತ, ಅಹಮ್ ಇರುವುದರಿಂದ, ಜೀವಿಯೊಂದಿಗೆ ಹೆಚ್ಚಾಗಿ ಸಂಬಂಧವನ್ನು ಬುದ್ಧಿ, ಅಹಂ ಇಟ್ಟುಕೊಂಡಿದ್ದು, ಎಲ್ಲಾ ಅವನಿಗೆ ಹೇಳಿ ಅವನನ್ನು ಅನುಭವಿಸುವಂತೆ ಮಾಡುತ್ತಿವೆ. ಕುರುಡನಿಗೆ ಪಕ್ಕದವನು ಸಹಾಯಕಾರಿಯಾಗಿ ಇದ್ದು ನಡೆಸುವಂತೆ, ಜೀವಿಗೆ ಒಂದುಕಡೆ ಬುದ್ಧಿ, ಮತ್ತೊಂದುಕಡೆ ಅಹಮ್ ಇದ್ದು, ಜೀವಿಯನ್ನು ನಡೆಸುತ್ತಿವೆ. ಜೀವಿಯು ಯಾವ ಅಂಗವೂ ಇಲ್ಲದ ಅಂಗವಿಕಲನು. ಆದ್ದರಿಂದ ಅವನು ಸ್ವತಃವಾಗಿ

ಮಾತನಾಡುವುದಿಲ್ಲ, ಸ್ವತಃವಾಗಿ ಕೇಳುವುದಿಲ್ಲ, ಸ್ವತಃವಾಗಿ ಏನು ಮಾಡುವುದಿಲ್ಲ. ಇದೆಲ್ಲವೂ ಗಮನಿಸಿದರೆ ಮೇಲಿನ ಒಗಟಿನಲ್ಲಿ ಹೇಳಿದಂತೆ, ಹಸಿರು ಮನೆಯಲ್ಲಿ ಹುಟ್ಟುವವನು, ಹಲವರ ಕೈಯಲ್ಲಿ ಬೀಳುವವನು, ಹಲವು ವಿಧಗಳಾಗಿ ಬದಲಾಗುವವನು, ಹಾಗೇ ಯಾರೊಂದಿಗೂ ಮಾತನಾಡುವವನು ಜೀವಿಯು ಅಲ್ಲ. ಆದ್ದರಿಂದ ಮೇಲಿನ ಕಥೆಯಲ್ಲಿನ ಪ್ರಶ್ನೆಗೆ ಎಲ್ಲಾ ವಿಧಗಳಲ್ಲಿ ಜೀವಿ ಎಂದು ಸಮಾಧಾನ ಹೇಳಬಹುದು.

**ಗೌರವವನ್ನು ಆಶಿಸಬೇಡ. ಜ್ಞಾನವನ್ನು ಕೋರಿಕೋ.**

## 25. ಹಸಿ ಪೆಟ್ಟಿಗೆಯಲ್ಲಿ ಬಿಚ್ಚಿಕೊಳ್ಳುತ್ತದೆ. ತೆಗೆದುಕೊಳ್ಳಲು ಹೋದರೆ ಮುಚ್ಚಿಕೊಳ್ಳುತ್ತದೆ. ಏನದು?

ಮೇಲಿನ ಒಗಟಿನಲ್ಲಿ ಹಸಿ ಮನೆ ಎಂದರೇ ಹಸಿ ಶರೀರವೆಂದು ಹೇಳಿಕೊಂಡಿದ್ದೇವೆ. ಇಲ್ಲಿ ಕೂಡಾ ಹಸಿರು ಪೆಟ್ಟಿಗೆ ಎಂದರೇ ಹಸಿ ಶರೀರವೆಂದೇ ಅರ್ಥಕೊಡುತ್ತದೆ. ಮಾನವನದ್ದು ಎಂದಿಗೂ ಹಸಿ ಶರೀರವೇ. ಮಾನವ ಶರೀರದಲ್ಲಿ ಒಂದು ಚಿಕ್ಕ ಮೊಗ್ಗಿನಂತಿದ್ದು ಶರೀರವೆಲ್ಲಾ ತುಂಬಿಕೊಳ್ಳುವಂತೆ ವಿಸ್ತರಿಸುತ್ತದೆ. ಅಂಥಾದ್ದು ಏನಿದೆಯೆಂದು ಆಶ್ಚರ್ಯಹೋಗಬೇಕಾದ ಕೆಲಸವಿಲ್ಲ. ಅದು ನಮ್ಮ ಶರೀರದಲ್ಲಿ ಚಿಕ್ಕಂದಿನಲ್ಲಿ ನಾವು ಹುಟ್ಟಿದಾಗಲೇ, ನಮ್ಮೊಂದಿಗೆ ಹುಟ್ಟಿ ಬೆಳೆಯುತ್ತಾ ಬಂದಿದೆ. ಅದೇ ಮನುಷ್ಯನ ಶರೀರದಲ್ಲಿ ಹುಟ್ಟಿದಾಗಿನಿಂದ ಮರಣಿಸುವವರೆಗು ಮುಖ್ಯಪಾತ್ರವನ್ನು ಪೋಷಿಸುತ್ತಿದೆ. ಎಲ್ಲಿಯೋ ತಲೆಯಲ್ಲಿರುವ ಜೀವಿಗೆ, ಹೊರಗಿನ ಪ್ರಪಂಚ ವಿಷಯಗಳನ್ನು ತಿಳಿಸುವ ಪಾತ್ರವನ್ನು ಪೋಷಿಸುವ ಮನಸ್ಸು ಏನಾದರೆ ಇದೆಯೋ, ಅದೇ ನಮ್ಮ ಶರೀರದಲ್ಲಿ ವಿಸ್ತರಿಸಿಕೊಳ್ಳುತ್ತದೆಂದು ತಿಳಿಯಬೇಕು. ಮನಸ್ಸು ನಿದ್ರೆ ಸಮಯದಲ್ಲಿ ಚಿಕ್ಕ ಚುಕ್ಕೆಯಂತೆ ಮುದುಡಿಕೊಂಡು ಕಾಣಿಸಿ ಕಾಣಿಸದಂತೆ, ಬ್ರಹ್ಮನಾಡಿಯಲ್ಲಿನ ಆತ್ಮನಲ್ಲಿ ಅಡಗಿದ್ದು, ಎಚ್ಚರಬಂದ ತಕ್ಷಣ, ಮನುಷ್ಯನ ಶರೀರದೊಳಗೆ ಪೂರ್ತಿಯಾಗಿ ವ್ಯಾಪಿಸಿಕೊಳ್ಳುತ್ತಿದೆ. ಒಂದು ಚಿಕ್ಕ ಉಂಡೆಯಾಗಿರುವ ಮನಸ್ಸು ಜಾಗ್ರತಾವಸ್ಥೆಯಲ್ಲಿ ಶರೀರವೆಲ್ಲಾ ವಿಕಸಿಸಿಕೊಳ್ಳುತ್ತದೆ.

ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು, ಶರೀರದಲ್ಲಿ ಎಲ್ಲಿ ಏನು ನಡೆದರೂ ಆ ವಿಷಯವನ್ನು ಕೂಡಲೇ ತಲೆಯಲ್ಲಿ ನಿವಾಸವಿರುವ ಬುದ್ಧಿಗೆ ಸೇರಿಸುತ್ತದೆ. ಬುದ್ಧಿ, ಮನಸ್ಸು ತಿಳಿಸಿದ ವಿಷಯವನ್ನು ಪಕ್ಕದಲ್ಲಿಯೇ ಇರುವ ಜೀವಿಗೆ ತಿಳಿಸುತ್ತದೆ. ಜೀವಿಯು ಸ್ವತಃವಾಗಿ ಏನು ಮಾಡಲಾರನು. ಹೊರಗೆ ಕಾಣಿಸಿರುವುದಾಗಲಿ, ಕೇಳಿಸಿರುವುದಾಗಲಿ ಮೊದಲು ಮನಸ್ಸು ಗ್ರಹಿಸಿ, ಒಳಗಿರುವ ಬುದ್ಧಿಗೆ ಸೇರಿಸಿದಾಗ, ಬುದ್ಧಿ ಜೀವಿಗೆ ಮನಸ್ಸು ತಿಳಿಸಿದ ವಿಷಯವನ್ನು ತಿಳಿಸುತ್ತದೆ. ಈ ವಿಧವಾಗಿ ಕೊನೆಗೆ ಜೀವಿಗೆ ವಿಷಯ ಸೇರುತ್ತಿದೆ. ಹೊರಗಿನ ಜ್ಞಾನೇಂದ್ರಿಯಗಳಿಗು, ಒಳಗಿನ ಬುದ್ಧಿಗು ಮಧ್ಯವರ್ತಿಯಾಗಿ, ವಾರ್ತಾಹರನಾಗಿ ಮನಸ್ಸು ಕೆಲಸ ಮಾಡುತ್ತಿದೆ. ಎಚ್ಚರದಲ್ಲಿ ಈ ವಿಧವಾಗಿ ಕೆಲಸ ಮಾಡುವ ಮನಸ್ಸು ನಿದ್ರಾವಸ್ಥೆಯಲ್ಲಿ ಶರೀರದಿಂದ ಮುದುಡಿಕೊಂಡು ಚಿಕ್ಕ ಸ್ವರೂಪವಾಗಿ ಬದಲಾಗಿಹೋಗಿ, ಸ್ವಲ್ಪ ಬಿಂದುವಿನಂತೆ ತಯಾರಾಗಿ ಬ್ರಹ್ಮನಾಡಿಯಲ್ಲಿ ಅಡಗಿಹೋಗುತ್ತಿದೆ. ಹೀಗೆ ಜಾಗ್ರತಾವಸ್ಥೆಯಲ್ಲಿ ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು, ನಿದ್ರಾವಸ್ಥೆಯಲ್ಲಿ ಚಿಕ್ಕ ಸ್ವರೂಪವಾಗಿ ಬದಲಾಗಿ ಆತ್ಮನಲ್ಲಿ ಅಡಗಿಹೋಗುತ್ತಿದೆ.

ಒಂದುವೇಳೆ ಯಾರಾದರೂ ಮನಸ್ಸನ್ನು ಜಯಿಸಬೇಕೆಂದುಕೊಂಡು, ಮನಸ್ಸಿನ ಮೇಲೆ ಧ್ಯಾಸ ಇಟ್ಟುಕೊಳ್ಳಬೇಕೆಂದುಕೊಂಡು ಹೊರಗಿನ ಆಲೋಚನೆಗಳು ಬರದಂತೆ ನೋಡಿಕೊಂಡಾಗ, ಮನಸ್ಸಿಗೆ ಯಾವಾಗ ಕೆಲಸ ಕಡಿಮೆಯಾದರೆ ಆಗ ಮನಸ್ಸು ಮುದುಡಿಕೊಂಡು ನಿದ್ರೆಯೊಳಗೆ ಹೋಗುತ್ತದೆ. ಯಾರಾದರೂ ಧ್ಯಾನ ಮಾಡಬೇಕೆಂದುಕೊಂಡು ಒಂದರ ಮೇಲೆ ಧ್ಯಾಸವನ್ನು ಇಟ್ಟಾಗ ತನಗೆ ತಕ್ಕಷ್ಟು ಕೆಲಸ ಇಲ್ಲದಂತೆ ಹೋಗಿ, ಒಂದರ ಮೇಲೆಯೇ ಧ್ಯಾಸ ಇರುವುದರಿಂದ ಆಗಲೂ ಕೂಡಾ ಚಿಕ್ಕದಾಗಿ ಶರೀರದಿಂದ ಮುದುಡಿಕೊಂಡು ಬ್ರಹ್ಮನಾಡಿಯಲ್ಲಿನ ಆತ್ಮನಲ್ಲಿ ಅಡಗಿಹೋಗುತ್ತದೆ. ಆಗ ಧ್ಯಾನ ಮಾಡುವವನು ನಿದ್ರೆಯೊಳಗೆ ಹೋಗುವುದು ನಡೆಯುತ್ತದೆ. ಮನಸ್ಸು ಅನೇಕ ವಿಷಯಗಳ ಮೇಲೆ ಕೆಲಸ ಮಾಡುವಾಗ ಚುರಕಾಗಿ ಇರುತ್ತದೆ. ಒಂದು ವಿಷಯವೊಂದರ ಕೆಲಸವನ್ನುಮಾತ್ರ ಮನೋಧ್ಯಾಸದ ಮೇಲೆ ಇಡುವುದರಿಂದ, ಮನಸ್ಸು ಚುರುಕುತನವನ್ನು ಕಳೆದುಕೊಂಡು ಮಂದವಾಗಿ

ಬದಲಾಗಿ ಶರೀರದಿಂದ ಮುದುಡಿಕೊಂಡು ನಿದ್ರೆಯೊಳಗೆ ಹೋಗುತ್ತದೆ. ಆದ್ದರಿಂದ ಈ ಒಗಟಿನಲ್ಲಿ ತಂದುಕೊಳ್ಳಲು (ಹಿಡಿದುಕೊಳ್ಳಲು) ಹೋದರೆ ಮುದುಡಿಕೊಳ್ಳುತ್ತದೆ ಎಂದಿದ್ದಾರೆ. ನಮ್ಮ ಶರೀರದಲ್ಲಿ ವಿಕಸಿಸುವುದು, ಮುದುಡಿಕೊಳ್ಳುವುದು ಒಂದು ಮನಸ್ಸು ಎಂದು ತಿಳಿಯುತ್ತಿದೆ.

**ಬ್ರಹ್ಮವಿದ್ಯೆಯನ್ನು ವಿಸ್ಮರಿಸಿದರೆ, ಮಾನವ ಜಾತಿಗೇ ತೀರದ ನಷ್ಟ.**

## 26. ಚಾವಡಿಯಲ್ಲಿ ಜುಟ್ಟಣ್ಣ ತಲೆ ಕೂದಲು ಬಿಚ್ಚಿಕೊಂಡಿದ್ದಾನೆ. ಯಾರು?

ಒಂದು ಊರಿನವರೆಲ್ಲರೂ ಸಮಾವೇಶವಾಗಿ ಮಾತನಾಡಿಕೊಳ್ಳುವ ಮನೆಯನ್ನು ಛತ್ರ ಇಲ್ಲವೇ ಚಾವಡಿ ಎನ್ನುತ್ತಾರೆ. ಜುಟ್ಟಣ್ಣ ಎಂದರೇ ತಲೆಕೂದಲು ಹೆಚ್ಚಾಗಿರುವವನನ್ನು ಜುಟ್ಟಣ್ಣ ಎನ್ನುತ್ತೇವೆ. ತನ್ನ ತಲೆಗೆ ಕೂದಲು ಹೆಚ್ಚಾಗಿವೆಯೆಂದು ತೋರಿಸುವುದಕ್ಕೆ ಯಾರಾದರೂ ಜುಟ್ಟನ್ನು ಬಿಚ್ಚಿಕೊಳ್ಳುತ್ತಾರೆ. ಇವೆಲ್ಲವೂ ಎಲ್ಲರಿಗೂ ತಿಳಿದ ವಿಷಯಗಳೇ. ಇನ್ನು ತಿಳಿಯದ ವಿಷಯಗಳು ಯಾವೆಂದರೆ! ತಲೆ ಕೂದಲನ್ನು ಆತ್ಮಗೆ ಗುರುತಾಗಿ ಹೇಳುತ್ತಿದ್ದೇವೆ. ಯಾರ ಶರೀರದಲ್ಲಾದರೇ ಆತ್ಮಜ್ಞಾನವು ಹೆಚ್ಚಾಗಿರುತ್ತದೊ ಅವನಿಗೆ ಆತ್ಮಶಕ್ತಿ ಕೂಡಾ ಹೆಚ್ಚಾಗಿರುತ್ತದೆ. ಆತ್ಮವನ್ನು ಜುಟ್ಟಿಗೆ ಹೋಲಿಸುವುದರಿಂದ ಆತ್ಮ ಜ್ಞಾನ ಇರುವವನನ್ನು ಜುಟ್ಟಣ್ಣ ಎಂದು ಹೇಳುವುದು ನಡೆದಿದೆ. ಸಂಪೂರ್ಣ ಜ್ಞಾನ ಇರುವವನಿಗೆ ಕಾಣಿಸುವ ಜುಟ್ಟು ಇಲ್ಲದಿದ್ದರೂ, ಆಧ್ಯಾತ್ಮಿಕ ಜ್ಞಾನ ಭಾವನೆಯಿಂದ ಜುಟ್ಟಣ್ಣ ಎಂದು ಕರೆಯಬಹುದು. ಇದನ್ನನುಸರಿಸಿ ಒಗಟಿನಲ್ಲಿ ಸಂಪೂರ್ಣ ಜ್ಞಾನ ಇರುವ ಗುರುವನ್ನು ಜುಟ್ಟಣ್ಣ ಎನ್ನುವುದು ನಡೆದಿದೆ. ಜುಟ್ಟಣ್ಣ ಸಂಪೂರ್ಣ ಜ್ಞಾನ ತಿಳಿದ ಗುರುವಾದಾಗ, ಗುರುವು ಸ್ವಲ್ಪ ಜನ ಶಿಷ್ಯರನ್ನು ಗುಂಪಾಗಿ ಸಮಾವೇಶಗೊಳಿಸಿ ಜ್ಞಾನವನ್ನು ಹೇಳುತ್ತಾನೆ. ಆದ್ದರಿಂದ ಮನುಷ್ಯರನ್ನು ಸಮಾವೇಶಪಡಿಸುವ ಸ್ಥಳವನ್ನು ಒಗಟಿನಲ್ಲಿ ಚಾವಿಡಿ ಎನ್ನುವ ಹೆಸರಿನಿಂದ ಹೇಳಿದ್ದಾರೆ. ನನಗೆ ಕೂದಲು ಹೆಚ್ಚಾಗಿವೆಯೆಂದು ಬಿಚ್ಚಿಕೊಂಡು, ಕೂದಲಿರುವವನು ತೋರಿಸಬಲ್ಲನು. ಅದೇ ವಿಧವಾಗಿ ಸಂಪೂರ್ಣ ಜ್ಞಾನಿಯಾದವನು ಯಾವ ಪ್ರಶ್ನೆಗಾದರೂ ಉತ್ತರ ಹೇಳಬಲ್ಲೆನೆಂದು ಪ್ರಕಟಿಸುವುದೇ, ಜುಟ್ಟು

ಬಿಚ್ಚಿಕೊಂಡು ತೋರಿಸಿದಂತೆ ಎಂದು ಅರ್ಥಮಾಡಿಕೊಳ್ಳಬೇಕು. ಗುರುವಾಗಿರುವವನು ಸರ್ವವು ತಿಳಿದವನಾಗಿರುವುದರಿಂದ, ಯಾವುದಕ್ಕಾದರೂ ಉತ್ತರ ಹೇಳುವ ಸಾಮರ್ಥ್ಯ ಹೊಂದಿರುವುದರಿಂದ ಗುರುವನ್ನು ಜುಟ್ಟಣ್ಣ ಎಂದು ಹೇಳುತ್ತಾ, ಜುಟ್ಟಣ್ಣ ತಲೆ ಬಿಚ್ಚಿಕೊಂಡಿದ್ದಾನೆಂದು ಹೇಳಿದ್ದಾರೆ. ಒಗಟಿನಲ್ಲಿ ಕೇಳಿದ ಪ್ರಶ್ನೆಗೆ ಜ್ಞಾನ ತಿಳಿದ ಗುರುವೆಂದು ಉತ್ತರ ದೊರೆತುಹೋಗಿದೆ.

**ನವಿಲುಗರಿವೊಂದರ ಸಂದೇಶವನ್ನು ನೋಡಿದರೆ ನಿನಗೇ ನಾಚಿಕೆಯಾಗುತ್ತದೆ.**

## 27. ಮೂರು ಮುಖಗಳುಳ್ಳ ಜಗತ್ಪೂಜ್ಯನು ಯಾರು?

'ದ್ವಾಪರ' ಎಂದರೇ ಎರಡಕ್ಕಿಂತ ಪ್ರತ್ಯೇಕವಾಗಿರುವುದೆಂದು ಅರ್ಥ. ಹಾಗೆಯೇ 'ತ್ರೈತ' ಎಂದರೇ ಮೂರು ಎಂದು ಅರ್ಥ. ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದವರು ಕ್ಷರನು, ಅಕ್ಷರನೆನ್ನುವ ಇಬ್ಬರು ಪುರುಷರಿಗಿಂತ ಪ್ರತ್ಯೇಕವಾಗಿರುವವನು ಪುರುಷೋತ್ತಮನೆಂದು ಹೇಳಿದ್ದಾರೆ. ವಿಶ್ವವೆಲ್ಲವನ್ನು ಸೃಷ್ಟಿಸಿದ ದೇವರು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು, ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ ಹೇಳಿದ್ದಾರೆ. ಅದೇ ವಿಷಯ ಸಿದ್ಧಾಂತ ರೂಪದಲ್ಲಿ ತ್ರೈತ ಸಿದ್ಧಾಂತವಾಗಿ ಹೇಳಲ್ಪಟ್ಟಿದೆ. ವಿಶ್ವವೆಲ್ಲವನ್ನು ಸೃಷ್ಟಿಸಿ ವಿಶ್ವವ್ಯಾಪ್ತವಾಗಿರುವ ದೇವರು ಜೀವಾತ್ಮವಾಗಿ, ಆತ್ಮವಾಗಿ, ಪರಮಾತ್ಮನಾಗಿ ಮೂರು ಭಾಗಗಳಾಗಿ ಇದ್ದಾನೆ. ಮೂರು ಮುಖಗಳಾಗಿರುವ ಏಕಪುರುಷನು ದೇವರು. ಆದ್ದರಿಂದ ಮೂರು ಮುಖಗಳುಳ್ಳವನು ಜಗತ್ಪೂಜ್ಯನೆಂದು ಮೇಲಿನ ಒಗಟಿನಲ್ಲಿ ಹೇಳಿದ್ದಾರೆ.

**ಜ್ಞಾನವನ್ನು ಕಲಿತುಕೊಳ್ಳಬೇಕೆಂದುಕೊ, ಗುರುವಾಗಿ ಬದಲಾಗಬೇಕೆಂದು ಕೊಳ್ಳಬೇಡ.**

## 28. ಬರುವೆ ನಿನ್ನೊಂದಿಗೆ ಎಂದಿಗೂ, ಕನಸಿನಲ್ಲಿಯಾದರೂ ಬಿಡೆನು ನಿನ್ನನ್ನು. ಎಂದಿರುವುದು ಯಾರು?

ಕಾದ ಕಬ್ಬಿಣದಲ್ಲಿ ಅಗ್ನಿ ಹೇಗೆ ಜೊತೆಯಾಗಿದೆಯೋ, ತೋಯ್ದ ಬೆಂಡಿನಲ್ಲಿ ನೀರು ಹೇಗಿದೆಯೋ, ಹಾಗೆ ಹುಟ್ಟಿದ ಜೀವಾತ್ಮಗೆ, ಆತ್ಮ

ಜೊತೆಯಾಗಿದೆ. ಒಂದೇ ಪಂಜರದಲ್ಲಿ ಜೋಡಿ ಪಕ್ಷಿಗಳಿರುವಂತೆ, ಒಂದೇ ಶರೀರದಲ್ಲಿ ಜೋಡಿ ಆತ್ಮಗಳಿವೆ. ಶರೀರದಲ್ಲಿನ ಜೋಡಿ ಆತ್ಮಗಳೇ ಜೀವಾತ್ಮ, ಆತ್ಮ. ಆತ್ಮಯಿಲ್ಲದ್ದು ಜೀವಾತ್ಮ ಬದುಕಲಾರದು. ಜೀವಾತ್ಮ ಇಲ್ಲದೆ ಆತ್ಮ ಇರಲಾರದು. ಆತ್ಮ ಇದ್ದರೆ ಜೀವಾತ್ಮ ಇರುತ್ತದೆ. ಹಾಗೆ ಜೀವಾತ್ಮ ಇದ್ದರೇನೆ ಆತ್ಮ ಇರುತ್ತದೆ. ಆತ್ಮಯಿಲ್ಲದ ಜೀವಾತ್ಮವಾಗಲಿ, ಜೀವಾತ್ಮ ಇಲ್ಲದ ಆತ್ಮವಾಗಲಿ ಪ್ರಪಂಚದಲ್ಲಿ ಎಲ್ಲಿಯೂ ಇರುವುದಿಲ್ಲ, ಇರಲಾರರು, ಇದು ಶಾಸನ. ಜೀವಿಗೆ ಕ್ಷಣ ಕಳೆಯಬೇಕೆಂದರೇ ಆತ್ಮ ಇರಬೇಕು. ಆತ್ಮ ಶಕ್ತಿಯಿಲ್ಲದ್ದು ಜೀವಿಗೆ ಮನುಗಡೆ ಒಂದುಕ್ಷಣ ಕೂಡಾ ಸಾಗುವುದಿಲ್ಲ. ಮರಣದಲ್ಲಾಗಲಿ, ಜನನದಲ್ಲಾಗಲಿ ಎರಡು ಆತ್ಮಗಳೂ ಇರಬೇಕಾಗಿದ್ದೇ. ಮರಣದಲ್ಲಿ ಜೀವಾತ್ಮವನ್ನು ಹಳೆ ಶರೀರದಿಂದ ಹೊಸ ಶರೀರಕ್ಕೆ ತೆಗೆದುಕೊಂಡು ಹೋಗುವುದು ಆತ್ಮವೇ. ಹಾಗೆ ಜನನದಲ್ಲಿ ಜೀವಾತ್ಮವನ್ನು ಹೊಸ ಶರೀರದಲ್ಲಿ ಸೇರಿಸಿದ ನಂತರ ಜ್ಞಾಪಕ ಮಾಡಿ ಎಚ್ಚರದೊಳಗೆ ತರುವುದು ಆತ್ಮವೇ. ಆತ್ಮ ತನ್ನ ಚೈತನ್ಯ ಶಕ್ತಿಯಿಂದ ಶರೀರವನ್ನು ಕರ್ಮಾನುಸಾರ ನಡೆಸುತ್ತಾ, ಜೀವಿಯ ಜೀವನವನ್ನು ಸಾಗಿಸುತ್ತಿದೆ. ಜೀವಿಯು ಮೂರು ಅವಸ್ಥೆಗಳಲ್ಲಿ ಎಲ್ಲಿದ್ದರೂ, ಆತ್ಮ ಶರೀರದಲ್ಲಿದ್ದು ಕೆಲಸ ಮಾಡುತ್ತಿದೆ. ಆತ್ಮ ಇಲ್ಲದಿದ್ದರೆ ನಿದ್ರೆ, ಎಚ್ಚರ, ಸ್ವಪ್ನ ಎನ್ನುವ ಮೂರು ಅವಸ್ಥೆಗಳು ಯಾವುವು ಇರುವುದಿಲ್ಲ. ಎಚ್ಚರದಲ್ಲಿ ಜೀವಿಯು ಪಾಪಪುಣ್ಯಗಳನ್ನು ಅನುಭವಿಸುವಂತೆ ಮಾಡುವುದು ಆತ್ಮವೇ. ಹಾಗೇ ನಿದ್ರೆಯಲ್ಲಿ ಜೀವಿಗೆ ಯಾವ ಅನುಭವವೂ ಇಲ್ಲದಂತೆ ಮಾಡಿ, ತಾನು ಮಾತ್ರ ಕೆಲಸ ಮಾಡುತ್ತಿರುತ್ತದೆ. ಇನ್ನೂ ಸ್ವಪ್ನದಲ್ಲಿ, ಮನಸ್ಸಿಗೆ ತನ್ನಲ್ಲಿಯೇ ಎಲ್ಲಾ ದೃಶ್ಯಗಳನ್ನು ತೋರಿಸುತ್ತಾ, ಆ ವಿಷಯಗಳು ಬುದ್ಧಿ ಮೂಲಕ ಜೀವಿಗೆ ಸೇರುವಂತೆ ಮಾಡಿ, ಜೀವಿಯನ್ನು ಸ್ವಪ್ನದಲ್ಲಿ ಕೂಡಾ ಕಷ್ಟಸುಖಗಳನ್ನು ಆತ್ಮ ಅನುಭವಿಸುವಂತೆ ಮಾಡುತ್ತಿದೆ. ಜೋಡಿ ಆತ್ಮಗಳಾದ ಜೀವಾತ್ಮ, ಆತ್ಮಗಳಲ್ಲಿ ಜೀವಾತ್ಮ ಕೆಲವು ಸಮಯಗಳಲ್ಲಿ ಕೆಲಸ ಮಾಡದಿದ್ದರೂ, ಆತ್ಮ ಮಾತ್ರ ಯಾವಾಗಲೂ ಕೆಲಸ ಮಾಡುತ್ತಲೇ ಇದೆ. ಆದ್ದರಿಂದ ಈ ಒಗಟಿನಲ್ಲಿ "ಬರುತ್ತೇನೆ ಎಂದಿಗೂ ನಿನ್ನೊಂದಿಗೆ, ಕನಸಿನಲ್ಲಿಯಾದರೂ ಬಿಡುವುದಿಲ್ಲ ನಿನ್ನನ್ನು" ಎಂದಿರುವುದು ಆತ್ಮಯೆಂದು ಹೇಳಬಹುದು.

**ಜ್ಞಾನದ ಹತ್ತಿರ ನಾಚಿಕೆ ಪಡಬಾರದು. ಯೋಗದ ಹತ್ತಿರ ಮಜ್ಜು ಬೀಳಬಾರದು.**

## 29. ಒಂದು ಕಾಯಿ, ಕಾಯಿಗೆ ಮೂರು ಭಾಗಗಳು, ಭಾಗಕ್ಕೆ ಒಂದು ಬೀಜ, ಕಾಯಿ ಯಾವುದು? ಬೀಜ ಯಾವುದು?

ಒಬ್ಬನು ಜ್ಞಾನದ ಮೇಲೆ ಆಸಕ್ತಿಹೊಂದಿ ಭಗವದ್ಗೀತೆಯನ್ನು ಓದಿದ್ದಾನೆ. ಭಗವದ್ಗೀತೆಯಲ್ಲಿನ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯಲ್ಪಟ್ಟರೆ ದೇವರು ತಿಳಿಯುವುದಕ್ಕೆ ದಾರಿ ಏರ್ಪಡುತ್ತದೆಂದು ತಿಳಿದಿದೆ. ಜ್ಞಾನ ಬೇಕೆಂದರೆ ಶ್ರದ್ಧೆ ಇರಬೇಕೆಂದು ಕೂಡಾ ಗೀತೆಯಲ್ಲಿಯೇ ಹೇಳಿದ್ದಾರೆ. ಆಗ ಸೋಮಣ್ಣ ಎನ್ನುವಾತನು ಹೆಚ್ಚಾಗಿ ಶ್ರದ್ಧೆಹೊಂದಿ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದನು. ಅಂತಹ ಸಮಯದಲ್ಲಿ ಒಂದು ರಾತ್ರಿ ಸೋಮಣ್ಣ ನಿದ್ರೆಹೋದ ನಂತರ ಆತನಿಗೆ ಸ್ವಪ್ನ ಬಂದಿದೆ. ಆ ಸ್ವಪ್ನದಲ್ಲಿ ಜೋರಾಗಿ ಮಳೆ ಸುರಿಯುವುದರಿಂದ ಒಂದು ನದಿ ತುಂಬಿ ಹರಿಯುತ್ತಿದೆ. ಅಂತಹ ನದಿ ತೀರದಲ್ಲಿ ನಿಂತಿರುವ ಸೋಮಣ್ಣ, ಕಾಲುಜಾರಿ ನದಿಯಲ್ಲಿ ಬಿದ್ದು ಕೊಚ್ಚಿಕೊಂಡು ಹೋಗುತ್ತಿದ್ದನು. ಅಂತಹ ಕಷ್ಟ ಸಮಯದಲ್ಲಿ ಕೂಡಾ ಸೋಮಣ್ಣ ಜ್ಞಾನವನ್ನು ಕುರಿತೇ ಆಲೋಚಿಸುತ್ತಾ "ಅಯ್ಯೋ! ನಾನು ಈಗ ನದಿಯಲ್ಲಿ ಮರಣಿಸಿದರೇ ದೇವರ ಜ್ಞಾನ ಹೇಗೆ ತಿಳಿಯುತ್ತದೆ" ಎಂದು ಅಂದುಕೊಳ್ಳುತ್ತಿದ್ದನು. ಅಷ್ಟರಲ್ಲಿಯೇ ಆತನಿಗೆ ಒಂದು ಒಣಗಿಹೋದ ಕುಂಬಳಕಾಯಿಯಂತಹ ಕಾಯಿ ದೊರೆತಿದೆ. ಸೋಮಣ್ಣ ಅದನ್ನು ಹಿಡಿದುಕೊಂಡಿದ್ದಾನೆ. ಆ ಕಾಯಿ ನೀರಿನಲ್ಲಿ ತೇಲುತ್ತಾ ಹೋಗುತ್ತಿರುವಾಗ, ಸೋಮಣ್ಣ ಕೂಡಾ ನೀರಿನಲ್ಲಿ ಮುಳಗದಂತೆ ತೇಲುತ್ತಾ ಹೋಗುತ್ತಿದ್ದನು. ಅಷ್ಟರಲ್ಲಿಯೇ ಕಾಯಿ ಒಂದು ದಡಕ್ಕೆ ಬಂದು ನಿಂತಿದೆ. ಆಗ ಸೋಮಣ್ಣ ಕಾಯನ್ನು ತೆಗೆದುಕೊಂಡು, ದಡವನ್ನು ಹತ್ತಿ ಹೊರಗೆ ಬಂದಿದ್ದಾನೆ. ತನ್ನನ್ನು ರಕ್ಷಿಸಿದ ಕಾಯನ್ನು ತನ್ನ ಹತ್ತಿರವೇ ಇಟ್ಟುಕೊಳ್ಳಬೇಕೆಂದುಕೊಂಡಿದ್ದಾನೆ. ಆಗ ಆ ಕಾಯಿ, ಏನು ಕಾಯಿ ಎಂದು ನೋಡಿದ್ದಾನೆ. ಅದು ಇಷ್ಟಕ್ಕು ಮುನ್ನ ಎಂದಿಗೂ ನೋಡಿರುವ ಕಾಯಲ್ಲ. ಅದರ ಹೆಸರೇನೊ ಕೂಡಾ ಗೊತ್ತಿಲ್ಲ. ಅದರ ಗಿಡ ಹೇಗಿರುತ್ತದೊ ಕೂಡಾ ತಿಳಿದಿಲ್ಲ. ಅದು ಆಗ ಹಸಿಕಾಯಿಯಾ, ಇಲ್ಲವೆ ಒಣಗಿದ ಕಾಯಾ ಎಂದು ನೋಡಿದರೂ ಅರ್ಥವಾಗಲಿಲ್ಲ.

ಮೇಲೆ ಹೇಗೆ ನೋಡಿದರೂ ಅರ್ಥವಾಗದ ಆ ಕಾಯನ್ನು ಹೊಡೆದು ನೋಡಿದರೆ ಅದು ಯಾವ ಕಾಯಿ ಆಗಿರುವುದು, ಹಸಿದಾಗಿರುವುದು, ಒಣಗಿರುವುದು ತಿಳಿದುಹೋಗುತ್ತದೆಂದು ಅಂದುಕೊಂಡ ಸೋಮಣ್ಣ ಅದನ್ನು ಭೂಮಿಗೆ ಹಾಕಿ ಹೊಡೆದು ಹೊಡೆಸಿಹಾಕಿದ್ದಾನೆ. ಆಗ ಆ ಕಾಯಿ ಮೂರು ಒಪ್ಪುಗಳಾಗಿ ಸೀಳಿಹೋಗಿದೆ. ಹಾಗೆ ಮೂರು ಭಾಗಗಳಾಗಿರುವ ಕಾಯನ್ನು ಸೋಮಣ್ಣ ಗತದಲ್ಲಿ ಎಂದಿಗೂ ನೋಡಿರಲಿಲ್ಲ. ಬೀಜಗಳು ನೋಡಿದರೆ ತಿಳಿಯುತ್ತದೆಂದುಕೊಂಡ ಸೋಮಣ್ಣ ಅದರಲ್ಲಿ ಬೀಜಗಳನ್ನು ಹುಡುಕಿದಾಗ, ಕಾಯಲ್ಲಿನ ಮೂರು ಭಾಗಗಳಲ್ಲಿ (ಒಪ್ಪುಗಳಲ್ಲಿ), ಒಂದೊಂದು ಒಪ್ಪಿನಲ್ಲಿ ಒಂದೊಂದು ಬೀಜಮಾತ್ರ ಇದೆ. ಆ ಮೂರು ಬೀಜಗಳನ್ನು ಕೂಡಾ ಸೋಮಣ್ಣ ಎಂದಿಗೂ ನೋಡಿರಲಿಲ್ಲ. ವಿಚಿತ್ರವೇನೆಂದರೇ ಮೂರು ಬೀಜಗಳು ಒಂದೊಂದು ಒಂದೊಂದು ಪರಿಮಾಣದಲ್ಲಿವೆ. ಅದರಲ್ಲಿ ಒಂದು ಚಿಕ್ಕ ಬೀಜವಾಗಿದ್ದು, ಮತ್ತೊಂದು ದೊಡ್ಡ ಬೀಜವಾಗಿದೆ. ಇನ್ನೊಂದು ಮಧ್ಯ ರೀತಿಯಲ್ಲಿದೆ. ಮೂರೂ, ಮೂರು ಪರಿಮಾಣಗಳ ಬೀಜಗಳು, ಯಾವ ಕಾಯಲ್ಲಿ ಇರುವುದಿಲ್ಲ ಎಂದುಕೊಂಡ ಸೋಮಣ್ಣ ಆ ಕಾಯನ್ನು ಕುರಿತು ಯಾರಾದರೂ ತಿಳಿದವರಿದ್ದರೆ, ಅವರನ್ನು ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ಆದ್ದರಿಂದ ಕಾಯಿಯ ಮೂರು ಒಪ್ಪುಗಳನ್ನು, ಮೂರು ಬೀಜಗಳನ್ನು ಜಾಗ್ರತೆಯಾಗಿ ಎತ್ತಿಟ್ಟು ಕೊಂಡಿದ್ದನು.  ಒಂದುದಿನ ಸೋಮಣ್ಣ ಇರುವ ಊರಿಗೆ ಒಬ್ಬ ಮಹರ್ಷಿ ಬಂದಿದ್ದಾನೆಂದು ತಿಳಿದು, ಆತನ ಹತ್ತಿರಕ್ಕೆ ಕಾಯನ್ನು ತೆಗೆದುಕೊಂಡುಹೋಗಿ ತೋರಿಸಿ, ಅದನ್ನು ಕುರಿತು ಕೇಳಬೇಕೆಂದುಕೊಂಡನು.

ಸೋಮಣ್ಣ, ಕಾಯಿಯ ಮೂರು ಭಾಗಗಳನ್ನು, ಮೂರು ಬೀಜಗಳನ್ನು ತೆಗೆದುಕೊಂಡು ಹೋಗಿ ಆ ಮಹರ್ಷಿಗೆ ತೋರಿಸಿದ್ದಾನೆ. ಸೋಮಣ್ಣ, ನದಿ ಪ್ರವಾಹದಿಂದ ಎಲ್ಲಾ ವಿಷಯಗಳು ಬಿಡದಂತೆ ಮಹರ್ಷಿಗೆ ಹೇಳಿದ್ದಾನೆ. ಆಗ ಆ ಮಹರ್ಷಿ, ಸೋಮಣ್ಣನನ್ನು ನೋಡಿ "ಇದು ಭೂಮಿಮೇಲೆ ಯಾವ ಗಿಡಕ್ಕು ಹುಟ್ಟುವ ಕಾಯಿಯಲ್ಲ. ನೀನು ಜ್ಞಾನದ ಮೇಲೆ ಆಸಕ್ತಿಯಿಂದ ಇರುವುದರಿಂದ ದೇವರೇ ಸ್ವತಃವಾಗಿ ಈ ಕಾಯನ್ನು ನಿನಗೆ ಕೊಟ್ಟಿದ್ದಾನೆ.

ಇದು ನೋಡುವುದಕ್ಕೆ ಕಾಯಿಯಂತೆ ಇದ್ದರೂ, ಇದು ಒಂದು ಜ್ಞಾನ ಸಂದೇಶದಂತೆ ಇದೆ. ನನಗೆ ತಿಳಿದ ಜ್ಞಾನದ ಪ್ರಕಾರ ಪ್ರವಾಹದಲ್ಲಿ ದೊರೆತ ಕಾಯಿ ದೇವರಿಗೆ ಪ್ರತಿರೂಪದಂಥಾದ್ದು. ಸೃಷ್ಠಿಗೆ ಪೂರ್ವದಲ್ಲಿ ದೇವರಾಗಿರುವವನು, ಸೃಷ್ಠಿ ನಂತರ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಆ ಮೂರು ಆತ್ಮಗಳಿಗೆ ಗುರುತಾಗಿ ಕಾಯಿ ಮೂರು ಭಾಗಗಳಾಗಿ ಸೀಳಿಹೋಗಿದೆ. ಮೂರು ಭಾಗಗಳಿಗು ಮೂರು ಹೆಸರುಗಳು ಇರುವುದರಿಂದ, ಆ ಹೆಸರುಗಳಿಗೆ ಗುರುತುಗಳಾಗಿ ಮೂರು ಚಿಕ್ಕ, ದೊಡ್ಡ, ಮಧ್ಯ ಬೀಜಗಳು ಇವೆ. ಇದೆಲ್ಲವನ್ನು ಗಮನಿಸಿದರೆ ಈ ಕಾಯಿ ಲಭಿಸಿರುವುದರಿಂದ ಶೀಘ್ರದಲ್ಲಿ ನಿನಗೆ ಮೂರು ಆತ್ಮಗಳ ಜ್ಞಾನ ಅರ್ಥ ವಾಗಬಲ್ಲದು ಎನ್ನುವ ಸೂಚನೆ ತಿಳಿಯುತ್ತಿದೆ ಎಂದನು. ಆ ಮಾತು ಕೇಳುತ್ತಲೇ ಸೋಮಣ್ಣನಿಗೆ ಸಂತೋಷವಾಗಿದೆ. ಆಗಲೇ ಎಚ್ಚರವಾಗಿದೆ. ಅದೆಲ್ಲವೂ ಸ್ವಪ್ನವೇ ಆದರೂ, ಸೋಮಣ್ಣನಿಗೆ ಮಾತ್ರ ಸತ್ಯವಾಗಿಯೇ ಅರ್ಥವಾಗಿದೆ.

**ಯೋಗಿ ಎಂದರೇ ಧನಿಕನಿಗಿಂತ ದೊಡ್ಡವನು.**

## 30. ಎರಡು ಮುಖಗಳುಳ್ಳವನು ಯಾರು?

ಎರಡು ಮೋರೆಯುಳ್ಳವನು ಎಂದರೆ ಎರಡು ಮುಖಗಳಿರುವವನೆಂದು ಅರ್ಥ. ಒಂದೇ ಶರೀರದಿಂದ ಮುಖಗಳು ಎರಡು ಇರುವವನನ್ನು ಎರಡು ಮುಖಗಳುಳ್ಳವನೆಂದು ಹೇಳಬಹುದು. ನಾನು ಒಬ್ಬ ವ್ಯಕ್ತಿಯನ್ನು ನೋಡಿದ್ದೇನೆ ಆತನಿಗೆ ಒಂದು ಮುಖವೇ ಇದ್ದರೂ ಎರಡು ಬುದ್ಧಿಗಳಿರುವವನೆಂದು ಎಲ್ಲರೂ ಅನ್ನುತ್ತಿದ್ದರು. ಆತನು ರೆವಿನ್ಯೂ ಡಿಪಾರ್ಟ್‌ಮೆಂಟಲ್ಲಿ ಒಬ್ಬ ಉನ್ನತ ಉದ್ಯೋಗಿ. ಆತನ ಕೆಳಗೆ ಉತ್ತರ ಭಾರತದೇಶದವರು, ದಕ್ಷಿಣ ಭಾರತದೇಶದವರು ಇಬ್ಬರೂ ಕೆಲಸ ಮಾಡುತ್ತಿದ್ದರು. ಆ ಉದ್ಯೋಗಿ ಉತ್ತರ ಭಾರತದೇಶಕ್ಕೆ ಸಂಬಂಧಿಸಿರುವವನು ಆದ್ದರಿಂದ ಪ್ರಾಂತೀಯ ಅಭಿಮಾನದಿಂದ ಉತ್ತರ ಭಾರತದೇಶದವರನ್ನು ಚೆನ್ನಾಗಿ ನೋಡಿಕೊಳ್ಳುತ್ತಾ, ದಕ್ಷಿಣ ಭಾರತದೇಶದವರನ್ನು ಅನೇಕ ತೊಂದರೆಗಳಿಗೆ ಗುರಿ ಮಾಡುತ್ತಿದ್ದನು. ಒಬ್ಬ ಆಫೀಸರ್ ಕೆಲವರ ಬಗ್ಗೆ ಒಳ್ಳೆಯದಾಗಿ, ಕೆಲವರ

ಬಗ್ಗೆ ಕೆಟ್ಟದಾಗಿ ಪ್ರವರ್ತಿಸುವುದು ನೋಡಿ, ಆತನ ಕೆಳಗೆ ಕೆಲಸಮಾಡುವವರು ಕೆಲವರು, ಆತನನ್ನು ಎರಡು ತಲೆಗಳ ಹಾವು ಎಂದು ಕೆಲವರನ್ನುತ್ತಿರುವಾಗ, ಕೆಲವರು ಎರಡು ಮುಖಗಳ ರಾಕ್ಷಸ ಅನ್ನುತ್ತಿದ್ದರು. ಇದೆಲ್ಲವೂ ಆ ಆಫೀಸರ್ ಪ್ರವರ್ತನೆಯನ್ನು ಅನುಸರಿಸಿ ಬಂದಿರುವ ಮಾತುಗಳೆಂದು ಅರ್ಥವಾಗಿದೆ. ಅದೇ ವಿಧವಾಗಿ ನಮ್ಮ ಶರೀರದಲ್ಲಿ ಕೂಡಾ ನಾವು ಮಾಡಿಕೊಂಡ ಪಾಪಪುಣ್ಯಗಳನ್ನನುಸರಿಸಿ ಆತ್ಮ ಎರಡು ವಿಧಗಳಾಗಿ ಪ್ರವರ್ತಿಸುತ್ತಿದೆ. ಮನುಷ್ಯ ಪಾಪವನ್ನು ಅನುಭವಿಸಬೇಕಾಗಿ ಬಂದಾಗ, ಆತ್ಮ ಅದಕ್ಕೆ ತಕ್ಕಂತೆ ಕೆಲಸ ಮಾಡಿ ಮನುಷ್ಯನನ್ನು ಶಿಕ್ಷಿಸುತ್ತದೆ. ಹಾಗೆಯೇ ಮನುಷ್ಯ ಪುಣ್ಯವನ್ನು ಅನುಭವಿಸಬೇಕಾಗಿ ಬಂದಾಗ ಆತ್ಮ ಪುಣ್ಯಕ್ಕೆ ತಕ್ಕಂತೆ ಕೆಲಸಮಾಡಿ, ಆ ಜೀವಿಗೆ ಸುಖವನ್ನು ಒದಗಿಸುತ್ತಾನೆ. ಶರೀರದಲ್ಲಿ ಎಲ್ಲಾ ಕೆಲಸಗಳು ಮಾಡುವುದು ಆತ್ಮವೇ ಆಗಿರುವುದರಿಂದ, ಜೀವಿಯು ಮಾಡಿಕೊಂಡ ಪಾಪಪುಣ್ಯಗಳನ್ನು ಅನುಸರಿಸಿ ಕೆಲವು ಸಮಯಗಳಲ್ಲಿ ಜೀವಿಯನ್ನು ಕಷ್ಟ ಇಡುವುದಾಗಿರುತ್ತದೆ. ಹಾಗೆಯೇ ಕೆಲವು ಸಮಯಗಳಲ್ಲಿ ಜೀವಿಯನ್ನು ಸುಖ ಇಡುವುದಾಗಿರುತ್ತದೆ. ಆದ್ದರಿಂದ ಈ ಒಗಟಿನಲ್ಲಿ ಎರಡು ಮುಖಗಳವನ್ಯಾರು? ಎನ್ನುವ ಪ್ರಶ್ನೆಗೆ ಆತ್ಮ ಎಂದು ಹೇಳುವುದೇ ಸರಿಯಾದ ಉತ್ತರವಾಗುತ್ತದೆ.

**ಯೋಗಶಕ್ತಿ ಎಂದರೇ ದೇವರ ಶಕ್ತಿಯೇ ಎಂದು ಜ್ಞಾಪಕದಲ್ಲಿಟ್ಟುಕೊ.**

## 31. ಬಾಲ ಇದೆ ಆದರೆ ಕೋತಿಯಲ್ಲ, ಹಾರುತ್ತದೆ ಆದರೆ ಪಕ್ಷಿಯಲ್ಲ. ಏನದು?

ಆಧ್ಯಾತ್ಮಿಕ ವಿದ್ಯೆಯಲ್ಲಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಮನಸ್ಸನ್ನು ಅನೇಕ ವಿಧಗಳ ಪ್ರಾಣಿಗಳೊಂದಿಗೂ, ಪಕ್ಷಿಗಳೊಂದಿಗೂ ಹೋಲಿಸಿ ಹೇಳಿ ಕೊಳ್ಳುವುದು ನಡೆದಿದೆ. ಮನಸ್ಸು ಮನನ ಮಾಡುವ ಕೆಲಸವನ್ನು ಕೂಡಾ ಮಾಡುತ್ತದೆ. ಕಳೆದುಹೋಗಿರುವುದನ್ನು, ಮುಂಬರುವುದನ್ನು, ಮನಸ್ಸು ಜ್ಞಾಪಕ ಮಾಡುತ್ತದೆ. ಕಳೆದುಹೋಗಿರುವುದನ್ನು ಜ್ಞಾಪಕ ಮಾಡಿದಾಗ, ಮುಂಬರುವುದನ್ನು ಕುರಿತು ಆಲೋಚನೆಗಳಿಂದ ಮುಳಗಿಸುತ್ತದೆ. ಹಾಗಿರುವಾಗ ಮನಸ್ಸು ಎಷ್ಟು

ನೀಚವಾಗಾದರೂ ಇದ್ದು ತೋರಿಸುತ್ತಿರುತ್ತದೆ. ಎಷ್ಟು ನೀಚವಾಗಿರುವ ವಿಷಯಗಳನ್ನಾದರೂ ತೋರಿಸುವುದಾದ್ದರಿಂದ, ಮನಸ್ಸನ್ನು ವೇಮನಯೋಗಿ ಹಂದಿಗೆ ಹೋಲಿಸಿ ಹೇಳಿದ್ದಾನೆ. ಮನಸ್ಸು ಎಷ್ಟೋ ಚಂಚಲವಾದುದು ಆದ್ದರಿಂದ, ಒಬ್ಬರು ನಾಯಿಯಾಗಿ ಹೋಲಿಸಿದರೇ, ಮತ್ತೊಬ್ಬರು ಕೋತಿಯಾಗಿ ಹೋಲಿಸಿ ಹೇಳಿದ್ದಾರೆ. ಅಷ್ಟೇಅಲ್ಲದೆ ಮನಸ್ಸು ಎಷ್ಟೋ ಬಲವಾದುದು ಕೂಡಾ! ಅದನ್ನು ಯಾರೂ ಬಂಧಿಸಲಾರರು. ಆದ್ದರಿಂದ ಮನಸ್ಸನ್ನು ವೇಮನಯೋಗಿಯವರು ಆನೆಯಾಗಿ ಕೂಡಾ ಹೋಲಿಸಿ ಹೇಳಿದ್ದಾರೆ. ಆದ್ದರಿಂದ ಕೆಲವರು ಒಗಟಿನ ಜ್ಞಾನಿಗಳು ಮನಸ್ಸನ್ನು ಬಾಲವಿದೆ ಆದರೆ ಕೋತಿಯಲ್ಲ, ಎಗರಿ ಹೋಗುತ್ತದೆ ಆದರೆ ಪಕ್ಷಿಯಲ್ಲ ಎಂದಿದ್ದಾರೆ ಮನಸ್ಸು, ವೇಗವಿರುವ ಕುದುರೆಯಂಥಾದ್ದು ಮತ್ತು ಎಗರಿ ಹೋಗುವ ಪಕ್ಷಿಯಂಥಾದ್ದು ಹಾಗಿರುವುದರಿಂದ, ರೆಕ್ಕೆಗಳ ಕುದುರೆಯಂತೆ ಮನಸ್ಸನ್ನು ಚಿತ್ರಿಸಿ ತೋರಿಸಿದವರು ಕೂಡಾ ಇದ್ದಾರೆ. ಇಷ್ಟು ವಿಧಗಳಿರುವ ಮನಸ್ಸನ್ನು ಜಯಿಸುವುದು, ಗಾಳಿಯನ್ನು ಮೂಟೆ ಕಟ್ಟಿದಂತಿರುತ್ತ ದೆಂದು ಭಗವದ್ಗೀತೆಯಲ್ಲಿ ಅರ್ಜುನನು ಹೇಳಿದ್ದಾನೆ. ಗಿಡದ ಮೇಲೆ ಕೋತಿಯಂತಹ ಮನಸ್ಸನ್ನೂ, ಆಕಾಶದಲ್ಲಿ ಪಕ್ಷಿಯಂತೆ ಎಗರುವ ಮನಸ್ಸನ್ನೂ ಜಯಿಸಿದವನು ಬ್ರಹ್ಮಯೋಗಿ ಆಗುತ್ತಾನೆ.

**ಮತ ಮರಣದ ವರೆಗೆ, ಪಥ ಮುಕ್ತಿ ಹೊಂದುವವರೆಗು ಇರುತ್ತದೆ.**

## 32. ಒಂದು ಗಿಡಕ್ಕೆ ಎರಡು ಕಾಯಿಗಳು, ನಾಲ್ಕು ಕೊಂಬೆಗಳು, ಎಲ್ಲಾ ಹೂವು ಇದೆ. ಎಲ್ಲಿ? ಏನು?

ಶರೀರ ಹೇಗೆ ತಯಾರಾಗಿದೆಯೆಂದು ತಿಳಿಯದೆಯೇ, ನಾನು ಜ್ಞಾನಿ ಎಂದು ಯಾರಾದರೂ ಅಂದರೇ, ಆನೆ ಪುಟ್ಟಿ ಮಂಕ್ರಿಕೆಳಗೆ ಮೊಟ್ಟೆ ಇಟ್ಟಿದೆಯೆನ್ನುವುದು ಎಷ್ಟು ಸತ್ಯವೊ, ಶರೀರ ಜ್ಞಾನ ತಿಳಿಯದವನು ಜ್ಞಾನಿಯೆನ್ನುವುದು ಅಷ್ಟೇ ಸತ್ಯವಾಗುತ್ತದೆ. ಆನೆ ಮೊಟ್ಟೆ ಇಡುವುದೇ ಅಸತ್ಯ. ಪುಟ್ಟಿಕೆಳಗೆ ಎಂದು ಹೇಳುವುದು ಮತ್ತಷ್ಟು ವಿಡ್ಡೂರವಾದ ಅಸತ್ಯವಾಗುತ್ತದೆ. ಹಾಗೇ ಶರೀರ ಯಂತ್ರಾಂಗವನ್ನು ತಿಳಿಯದವನು, ಜ್ಞಾನಿಯೆನ್ನುವುದು ಪೂರ್ತಿ

ವಿಡ್ದೂರವಾದ ಅಸತ್ಯವಾಗುತ್ತದೆ. ಆದ್ದರಿಂದ ಆತ್ಮ ಜ್ಞಾನಿ ಆಗುವುದಕ್ಕೆ ಮೊದಲು ಆತ್ಮ ನಿವಾಸಿಸುವ ಶರೀರವನ್ನು ಕುರಿತು ಪೂರ್ತಿಯಾಗಿ ತಿಳಿದಿರಬೇಕು. ಹಾಗೆ ತಿಳಿಯದೇ ಹೋದರೇ,ಅವನು ಎಂದಿಗಾದರೂ ಅಜ್ಞಾನಿಯೇ ಹೊರತು, ಜ್ಞಾನಿ ಆಗಲಾರನು. ಈ ಒಗಟಿನಲ್ಲಿ ಒಂದು ಗಿಡ ಎಂದರೇ! ಒಂದು ಶರೀರವೆಂದೇ ಅರ್ಥ. ಗಿಡಕ್ಕೆ ಕಾಯಿಗಳಿರುವುದು ಸಹಜ. ಹಾಗೆಯೇ ಮನುಷ್ಯನಿಗೆ ಕರ್ಮ ಫಲ ಇರುವುದು ಸಹಜವೇ. ಗಿಡವೆಂದಮೇಲೆ ಕಾಯಿ, ಮನುಷ್ಯ ನೆಂದಮೇಲೆ ಕರ್ಮ ಇರುತ್ತವೆ. ಮನುಷ್ಯ ಎನ್ನುವ ಗಿಡಕ್ಕೆ, ಪಾಪ ಪುಣ್ಯ ಎನ್ನುವ ಎರಡು ವಿಧಗಳ ಕರ್ಮಗಳಿವೆ. ಆದ್ದರಿಂದ ಈ ಒಗಟಿನಲ್ಲಿ ಗಿಡಕ್ಕೆ ಎರಡು ಕಾಯಿಗಳು ಎಂದಿದ್ದಾರೆ. ಹೊರಗಿನ ಗಿಡಕ್ಕೆ ಕೊಂಬೆಗಳು ಎಷ್ಟಾದರೂ ಇರಬಹುದು ಆದರೆ, ಮನುಷ್ಯನಿಗೆ ಮಾತ್ರ ನಾಲ್ಕು ಕೊಂಬೆಗಳಾಗಿ, ಗುಣಚಕ್ರ ವಿಭಜಿಸಲ್ಪಟ್ಟಿದೆ. ನಾಲ್ಕು ಕೊಂಬೆಗಳಿರುವ ಮಾನವ ವೃಕ್ಷಕ್ಕೆ, ಪಾಪಪುಣ್ಯವೆನ್ನುವವು ಸುಖದುಃಖ ರೂಪದಲ್ಲಿ ಪ್ರಸ್ತುತಕ್ಕೆ ಎರಡು ಕಾಯಿಗಳು ಕಾದಿರುವುದು ನಿಜ. ಇನ್ನೂ ಭವಿಷ್ಯತ್ತಿನಲ್ಲಿ ಎಷ್ಟೋ ಕರ್ಮಗಳು ಬೆಳಯಬೇಕಾಗಿದೆ. ಆದ್ದರಿಂದ ಮೂರುಕೊಂಬೆಗಳಲ್ಲಿ ಮಾತ್ರ ಹೂವು ಬಹಳ ಇದೆ. ನಾಲ್ಕನೆಕೊಂಬೆಯಲ್ಲಿ ಕೂಡಾ ಇದ್ದು ಇರದಂತೆ ಅಲ್ಲಲ್ಲಿ ಕಾಣಿಸುತ್ತಾ ಇದೆ. ಮಾನವ ವೃಕ್ಷವೊಂದರ ವಿಷಯವನ್ನು ಕುರಿತು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ, ಮೊದಲ ಎರಡು ಶ್ಲೋಕಗಳಲ್ಲಿಯೇ ಇದೇ ವಿಷಯವನ್ನೇ ಹೇಳಿದ್ದಾರೆ. ಮುಂಬರುವಂತಹ ಕಾಲದಲ್ಲಿ ಅನುಭವಿಸಬೇ ಕಾದ ಕರ್ಮ ಹೂವಾಗಿ ಇದೆ. ತಾಮಸ, ರಾಜಸ, ಸಾತ್ತ್ವಿಕ, ಯೋಗ ಎನ್ನುವ ನಾಲ್ಕು ಕೊಂಬೆಗಳಿಗೆ ಹೂವು ಇರುವಾಗ, ಬಿಡುವ ಕಾಯಿಗಳು (ಕರ್ಮಫಲಗಳು) ಒಳ್ಳೆಯವು, ಕೆಟ್ಟವು ಎನ್ನುವ ಎರಡು ವಿಧಗಳು ಇವೆ. ಈ ಒಗಟಿನಲ್ಲಿ ಮಾನವ ವೃಕ್ಷವನ್ನು ಕುರಿತು, ಕರ್ಮ ಫಲಗಳನ್ನು ಕುರಿತು, ಗಿಡದಮೇಲೆ ಜೀವಿಯೆನ್ನುವ ಪಕ್ಷಿ ಇರುವ ನಾಲ್ಕು ಕೊಂಬೆಗಳನ್ನು ಕುರಿತು ಹೇಳುವುದಾಗಿದೆ.

**ದೇಹಕ್ಕೆ ದೇಹಿ ಪತಿಯಾಗುತ್ತಾನೆ, ನೀನು ಏನು ಆಗುವುದಿಲ್ಲ.**

## 33. ನಾಚಿಕೆ ಪಡುವವನು ಒಬ್ಬನು, ನಾಚಿಕೆ ಬೀಳದವನು ಒಬ್ಬನು. ಇಬ್ಬರೂ ಸೇರಿ ಕುರುಡನ ಹತ್ತಿರ ಜೀತಕ್ಕಿದ್ದಾರೆ. ಯಾರು?

ಈ ಒಗಟಿನಲ್ಲಿ ಇಬ್ಬರು ಕೂಲಿಯವರು ಇಲ್ಲವೆ ಜೀತದವರು ಇದ್ದಾರೆ. ಇಬ್ಬರಿಂದ ಕೆಲಸ ಮಾಡಿಸಿಕೊಳ್ಳುವ ಧನಿಕನು ಒಬ್ಬನಿದ್ದಾನೆ. ಧನಿಕನು ಕುರುಡನು. ಕುರುಡನು ಯಾವ ಕೆಲಸ ಮಾಡಲಾರನು. ಆದ್ದರಿಂದ ಇಬ್ಬರಿಂದ ಕೆಲಸವನ್ನು ಮಾಡಿಸಿಕೊಳ್ಳುತ್ತಿದ್ದಾನೇನೊ ವಿವರವಾಗಿ ನೋಡೋಣ. ಒಂದು ಊರಿನಲ್ಲಿ ಒಬ್ಬ ಧನಿಕನಿದ್ದಾನೆ. ಆತನು ಕುರುಡನು. ಕುರುಡರಿಗೆ ಕಣ್ಣು ಇಲ್ಲದಿದ್ದರೂ ನಿಘಾ ಹೆಚ್ಚಾಗಿ ಇರುತ್ತದೆ. ಆದ್ದರಿಂದ ಹೆಸರಿಗೆ ಕುರುಡುನೇ ಹೊರತು, ನೋಡದಿರುವುದನ್ನು ಸಹ ಹೇಳಬಲ್ಲನು. ತನ್ನ ಮನೆಯಲ್ಲಿ ಇಬ್ಬರು ಅಣ್ಣತಮ್ಮಂದಿರನ್ನು ಕೆಲಸ ಮಾಡುವುದಕ್ಕೆ ನೇಮಿಸಿಕೊಂಡಿದ್ದಾನೆ. ಅವರು ಇಬ್ಬರೂ ಅಣ್ಣತಮ್ಮಂದಿರೇ ಆದರೂ, ಇಬ್ಬರೂ ಬೇರೆಬೇರೆ ಮನಸ್ತತ್ತ್ವಗಳು ಇರುವವರಾಗಿ ಇದ್ದಾರೆ. ಅವರಲ್ಲಿ ಚಿಕ್ಕವನು ಯಾವ ಕೆಲಸವನ್ನು ಮಾಡಬೇಕೆಂದರೂ ನಾಚಿಕೆ ಪಡುತ್ತಿರುತ್ತಾನೆ. ನಾಚಿಕೆ ಇರುವುದರಿಂದ, ಅವನು ಯಾರ ಮುಂದೆ ಕೆಲಸವನ್ನು ಮಾಡುವುದಿಲ್ಲ. ದೊಡ್ಡವನಿಗೆ ನಾಚಿಕೆ ಗೀಚಿಕೆ ಎನ್ನುವ ಗುಣಗಳು ಯಾವುವು ಇಲ್ಲ. ಯಾವ ಕೆಲಸವನ್ನಾದರೂ, ಯಾರ ಮುಂದೆಯಾದರೂ ಮಾಡಬಲ್ಲನು. ದೊಡ್ಡವನು ಸಹನೆಯಿಂದ, ಎಲ್ಲಿ ನಾಚಿಕೆ ಪಡದಂತೆ ಕೆಲಸಗಳು ಮಾಡುತ್ತಿರುತ್ತಾನೆ. ಇಬ್ಬರು ಒಂದೇ ಮನೆಯಲ್ಲಿ ಇರುವುದರಿಂದ, ಚಿಕ್ಕವನು ನಾಚಿಕೆಯಿಂದ ಯಾವ ಕೆಲಸವನ್ನು ಮಾಡದಿದ್ದರೂ, ದೊಡ್ಡವನೆ ಚಿಕ್ಕವನ ಕೆಲಸವನ್ನು ಕೂಡಾ ಮಾಡಿಡುತ್ತಿದ್ದನು. ಮನೆ ಕೆಲಸ ಎಲ್ಲವನ್ನು ಇಬ್ಬರಿಗು ಧನಿಕನು ಒಪ್ಪಿಸಿರುವುದರಿಂದ, ದೊಡ್ಡವನು ಕೆಲಸ ಮಾಡುವುದಕ್ಕೆ ನಾಚಿಕೆ ಪಡದವನಾಗಿ ಮನೆಯಲ್ಲಿನ ಎಲ್ಲಾ ಕೆಲಸಗಳನ್ನು ಮಾಡುತ್ತಿರುವಾಗ, ಚಿಕ್ಕವನು ಮಾತ್ರ ಕೆಲಸ ಮಾಡದಂತೆ ದೊಡ್ಡವನ ಮರೆಯಲ್ಲಿರುತ್ತಾ ದೊಡ್ಡವನು ಮಾಡಿಟ್ಟಿರುವುದನ್ನು ತಿನ್ನುತ್ತಿದ್ದನು. ಹೀಗೆ ಸುಮಾರು ಎಂಭತ್ತು (80) ವರ್ಷಗಳು ಕೆಲಸ ಮಾಡಿದಾಗ, ಕುರುಡ ಯಜಮಾನ ದೊಡ್ಡವನನ್ನು ಕರೆದು “ಎಂಭತ್ತು ವರ್ಷಗಳಿಂದ ನೀನು ಕೆಲಸ ಮಾಡುತ್ತಿದ್ದರೆ

ನಿನ್ನ ತಮ್ಮ ಸುಮ್ಮನೆ ಕುಳಿತುಕೊಂಡು ತಿನ್ನುತ್ತಿದ್ದಾನೆ. ಹಾಗೆ ಕೆಲಸ ಮಾಡದಂತೆ ತಿನ್ನುವುದೇ ಅಲ್ಲದೆ, ನನಗೆ ಊಟ ತಂದಾಗಲೆಲ್ಲ, ಅಡುಗೆಯನ್ನು ಯಾರು ಮಾಡಿದ್ದಾರೆ ಎಂದು ನಾನು ಕೇಳಿದರೆ, ನಮ್ಮ ಅಣ್ಣ ಮಾಡಿದ್ದಾನೆಂದು ಒಂದು ದಿನಕೂಡಾ ಹೇಳಲಿಲ್ಲ. ಯಾವಾಗ ಕೇಳಿದರೂ ನಾನೇ ಮಾಡಿದ್ದೇನೆಂದು ನನ್ನೊಂದಿಗೆ ಸುಳ್ಳು ಹೇಳುತ್ತಾ ಬಂದಿದ್ದಾನೆ. ನಾನು ಕುರುಡನೆಂದು, ಏನು ಹೇಳಿದರೂ ಕೇಳುತ್ತೇನೆಂದು, ನನ್ನೊಂದಿಗೆ ಪೂರ್ತಿಯಾಗಿ ಅಸತ್ಯವನ್ನೇ ಹೇಳಿದ್ದಾನೆ. ಇವನು ಕುರುಡನು ಎಂದು ನನ್ನನ್ನು ಕಡಿಮೆ ಲೆಕ್ಕ ಹಾಕಿದ್ದಾನೆ. ನಾನು ಕುರುಡನಾದರೂ, ನನಗೆ ದೃಷ್ಠಿ ಇಲ್ಲದಿದ್ದರೂ, ನನ್ನ ನಿಘದಿಂದ ನಾನು ಎಲ್ಲವನ್ನು ನೋಡಬಲ್ಲೆನು. ನೀವು ಈ ಮನೆಯಲ್ಲಿ ಇಷ್ಟುದಿನ ಕೆಲಸ ಮಾಡಿದ್ದೀರ. ಇನ್ನು ಸಾಕು ನೀವು ಬೇರೆಮನೆ ನೋಡಿಕೊಳ್ಳಿ." ಎಂದು ಹೇಳಿದ್ದಾನೆ. ಆ ಮಾತುಗಳು ಕೇಳಿದ ನಾಚಿಕೆಯಿಲ್ಲದ ದೊಡ್ಡವನು, "ಇಷ್ಟುಕಾಲ ನಿನ್ನ ಹತ್ತಿರ ಕೆಲಸ ಮಾಡಿದ್ದೇವೆ ಈಗ ಬೇರೆಯವರ ಹತ್ತಿರ ಕೆಲಸ ಮಾಡಲಾರೆವು. ನಿನ್ನ ಹತ್ತಿರವೇ ಕೆಲಸ ಮಾಡುತ್ತೇವೆ." ಎಂದು ಹೇಳಿದ್ದಾನೆ. ಆಗ ಧನಿಕನು "ಪಕ್ಕದ ಊರಿನಲ್ಲಿ ನನ್ನದೇ ಇನ್ನೊಂದು ಮನೆ ಇದೆ, ನಾನು ಕೂಡಾ ಅಲ್ಲಿ ಇರುತ್ತೇನೆ. ನೀವು ಆ ಮನೆಗೆ ಹೋಗಿ ಕೆಲಸಮಾಡಿರಿ." ಎಂದು ಹೇಳಿ ಕಳಿಸಿದ್ದಾನೆ. ಅಲ್ಲಿಂದ ಇಬ್ಬರು ಅಣ್ಣತಮ್ಮಂದಿರು ಹೊರಟು, ಪಕ್ಕದ ಊರಿನಲ್ಲಿ ಧನಿಕನ ಮನೆಯಲ್ಲಿಯೇ ಇಳಿದಿದ್ದಾರೆ. ಅಲ್ಲಿ ಕೆಲಸ ಮಾಡುವುದಕ್ಕೆ ಪ್ರಾರಂಭಿಸಿದ್ದಾರೆ. ಅಲ್ಲಿ ಕೂಡಾ ಚಿಕ್ಕವನು ನಾಚಿಕೆ ಪಡುತ್ತಾ ಕೆಲಸಮಾಡದೆ ಇದ್ದರೆ ಪಕ್ಕದ ಬೀದಿಯಲ್ಲಿನ ಒಬ್ಬ ಗುರುವಿನಂತಹ ಹಿರಿಯನು, ಚಿಕ್ಕವನ ಬುದ್ಧಿಗೆ ಜ್ಞಾನ ಹೇಳಿದ್ದಾನೆ.

ಗುರುವಾಗಿ ಚಲಾವಣೆ ಆಗುತ್ತಿರುವ ವ್ಯಕ್ತಿ, ಚಿಕ್ಕವನಿಗೆ ಅನೇಕ ವಿಧಗಳಲ್ಲಿ ಬೋಧಿಸಿ, "ನಿಮ್ಮ ಅಣ್ಣ ಶ್ರಮಪಡುತ್ತಿದ್ದರೆ, ನಿಮ್ಮಣ್ಣ ಮಾಡಿರುವುದೆಲ್ಲಾ ನಾನೇ ಮಾಡಿದ್ದೇನೆಂದು ನೀನು ಇತರರಿಗೆ ಹೇಳಿಕೊಳ್ಳುವುದು ಒಳ್ಳೆಯದಲ್ಲ. ಹಾಗೆ ಹೇಳುವುದರಿಂದ ನಿಮ್ಮ ಅಣ್ಣನಿಗೆ ದ್ರೋಹ ಮಾಡಿದಂತಾಗುತ್ತದೆ. ಅಣ್ಣನಿಗೆ ದ್ರೋಹ ಮಾಡುವುದು ಆತ್ಮವನ್ನು ದ್ರೋಹ ಮಾಡಿದಂತೆ ಎಂದು" ಹೇಳಿದಾಗ,

ಆಗ ಚಿಕ್ಕವನು ನನಗೀಗ ಜ್ಞಾನೋದಯವಾಗಿದೆ. ಈಗಿನಿಂದ ಸುಳ್ಳು ಹೇಳುವುದಿಲ್ಲವೆಂದು ಆ ವೃದ್ಧನಿಗೆ ಹೇಳಿ, ಅಂದಿನಿಂದ ಸತ್ಯವನ್ನು ಹೇಳುವುದಕ್ಕೆ ಪ್ರಯತ್ನಿಸುತ್ತಿದ್ದನು. ಆಗಾಗ ಅಭ್ಯಾಸದ ಪ್ರಕಾರ ಅಸತ್ಯವನ್ನು ಹೇಳಿದರೂ ಪುನಃ ಎಚ್ಚರಗೊಂಡು, ನಾಚಿಕೆಯನ್ನು ಬಿಟ್ಟು ನಿಜವನ್ನು ಹೇಳುವುದಕ್ಕೆ ಅಭ್ಯಾಸವಾಗಬೇಕೆಂದುಕೊಂಡು ಅದೇ ಪ್ರಯತ್ನವನ್ನು ಮುಂದುವರೆಸಿದನು. ನೋಡಿದ್ದೀರಾ! ಇಬ್ಬರು ಅಣ್ಣತಮ್ಮಂದಿರ ಚರಿತ್ರೆ ಹೇಗೆ ಇದೆಯೋ! ಹೊರಗೆ ಅವರು ಇಬ್ಬರೂ ಇರುವಂತೆ, ನಮ್ಮ ಶರೀರದಲ್ಲಿ ಕೂಡಾ ಆತ್ಮ, ಜೀವಾತ್ಮ ಎನ್ನುವ ಇಬ್ಬರು ಸೋದರರು ಇದ್ದಾರೆ. ಅವರಿಬ್ಬರಲ್ಲಿ ದೊಡ್ಡವನಾದ ಆತ್ಮ ನಾಚಿಕೆಯಿಲ್ಲದೆ ಎಲ್ಲಾ ವೇಳೆಯಲ್ಲಿ ಕೆಲಸವನ್ನು ಮಾಡಿದಾಗ, ಜೀವಾತ್ಮ ಎನ್ನುವ ಚಿಕ್ಕವನು ನಾಚಿಕೆ ಪಡುತ್ತಾ, ಯಾವ ಕೆಲಸವನ್ನು ಮಾಡದಂತೆ, ಅಡುಗೆ ಮನೆಯಲ್ಲಿ ಕುಳಿತುಕೊಂಡು ಅಣ್ಣ ಮಾಡಿರುವುದನ್ನು ತಿನ್ನುತ್ತಿದ್ದನು. ಆದರೆ ಯಾರು ಕೇಳಿದರೂ ಅಡುಗೆಯನ್ನು ತಾನೇ ಮಾಡಿದಂತೆ ಎಲ್ಲರಿಗೂ ಹೇಳಿಕೊಳ್ಳುತ್ತಿದ್ದನು. ಆತ್ಮಜ್ಞಾನವನ್ನು ಬೋಧಿಸುವ ಭಗವದ್ಗೀತೆಯಲ್ಲಿ ಜೀವಿಯು ಗುಣಗಳಲ್ಲಿ ಇದ್ದಾನೆಂದು ತಿಳಿದಿದೆ. ಹಾಗೆ ಆತ್ಮ ಗುಣಗಳಲ್ಲಿ ಇಲ್ಲದಂತೆ ಶರೀರದಲ್ಲಿ ಕೆಲಸ ಮಾಡುತ್ತಿದೆಯೆಂದು ಇದೆ. ಅಷ್ಟೇ ಅಲ್ಲದೆ ಜೀವಾತ್ಮ, ಶರೀರದಲ್ಲಿ ತಾನು ಯಾವ ಕೆಲಸವನ್ನು ಮಾಡದಿದ್ದರೂ ಆತ್ಮ ಮಾಡಿದ ಕೆಲಸವನ್ನೆಲ್ಲಾ ತಾನೇ ಮಾಡಿದ್ದೇನೆಂದು, ಅಹಮ್‌ನಿಂದ ಹೇಳುವುದರಿಂದ ಜೀವಿಗೆ ಕರ್ಮ ಅಂಟಿಕೊಳ್ಳುತ್ತಿದೆಯೆಂದು ಗೀತೆಯಲ್ಲಿ ತಿಳಿಯುತ್ತಿದೆ. ಶರೀರ ದಲ್ಲಿಯೇ ಜೀವಾತ್ಮ, ಆತ್ಮಗಳಿಗಿಂತ ಬೇರೆಯಾಗಿರುವ ಪರಮಾತ್ಮ ರೂಪ, ನಾಮ, ಕ್ರಿಯೆಗಳು ಇಲ್ಲದವನಾಗಿದ್ದು, ಎಲ್ಲವನ್ನು ಸಾಕ್ಷಿಯಾಗಿ ನೋಡುತ್ತಿದ್ದಾನೆ. ಪರಮಾತ್ಮ ಎಲ್ಲದಕ್ಕು ಅಧಿಪತಿಯಾದರೂ, ಶರೀರವನ್ನು ಆತ್ಮಗು ಜೀವಾತ್ಮಗು ಬಿಟ್ಟುಕೊಟ್ಟು ನೋಡುತ್ತಿದ್ದಾನೆ. ಗೀತೆಯನ್ನು ಓದಿದವರು, ಗೀತೆಯಲ್ಲಿನ ಜ್ಞಾನವನ್ನು ಗ್ರಹಿಸಿದವರು, ಮನುಷ್ಯನಲ್ಲಿ ನಡೆಯುತ್ತಿರುವ ಅಕ್ರಮವನ್ನು ನೋಡಿ ಜೀವಿಯಾಗಿರುವವನು, ಮಾಡದ ಕೆಲಸವನ್ನು ತಾನೇ ಮಾಡಿದ್ದೇನೆಂದು ಅನವಶ್ಯಕವಾಗಿ ಅಂದುಕೊಂಡು ಕರ್ಮವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆಂದು ತಿಳಿದವರು, ಮನುಷ್ಯನನ್ನು ಜ್ಞಾನದಿಂದ ಎಚ್ಚರಿಸಿದಾಗ, ಜೀವಿ ಆದವನು

ಕೆಲವು ಕಡೆ, ಕೆಲವರಲ್ಲಿ, ಜ್ಞಾನಿಗಳು ಹೇಳಿದ ಮಾತನ್ನು ಸ್ವಲ್ಪವಾದರೂ ಕೇಳದಂತೆ ಅಹಮ್‌ನನ್ನು ಬಿಡದಂತೆ ತಮ್ಮ ಅಜ್ಞಾನದಲ್ಲಿ ತಾವು ಇದ್ದಾರೆ. ಕೆಲವುಕಡೆ ಯಾವುದೊ ಒಂದು ಜೀವಿಯು ಜ್ಞಾನಿಗಳ ಮಾತುಗಳನ್ನು ಗ್ರಹಿಸಿದವನಾಗಿ ತನ್ನ ತಪ್ಪನ್ನು ತಾನು ತಿಳಿದುಕೊಂಡು, ಈಗಿನಿಂದಾದರೂ ಮಾಡದ ಕೆಲಸವನ್ನು ತಾನೇ ಮಾಡಿದ್ದೇನೆಂದು ಹೇಳಬಾರದೆಂದುಕೊಂಡು ಪ್ರಯತ್ನ ಮಾಡುತ್ತಿದ್ದಾನೆ. ಈ ಒಗಟಿನಲ್ಲಿ ಎಷ್ಟೋ ಜ್ಞಾನವನ್ನು ಅಳವಡಿಸಿ ಜೀವಾತ್ಮ, ಆತ್ಮಗಳನ್ನು ಜೀತಗಾರರನ್ನಾಗಿ ಹೇಳಿ ಅದರಲ್ಲಿ ಗುಣಗಳಿರುವವನು ಜೀವಾತ್ಮಯೆಂದು, ಗುಣಗಳಿಲ್ಲದವನು ಆತ್ಮವೆಂದು ತಿಳಿಯುವಂತೆ ನಾಚಿಕೆ ಇರುವವನು, ನಾಚಿಕೆ ಇಲ್ಲದವನೆಂದು ಹೇಳಿ ಪರಮಾತ್ಮನನ್ನು ಆತನ ಸ್ಥಾನಕ್ಕೆ ತಕ್ಕಂತೆ ಕುರುಡನಂತೆ ಹೇಳುವುದು ಎಷ್ಟೋ ವಿಶೇಷ ಜ್ಞಾನ. ಇದೆಲ್ಲವೂ ಓದಿದ ನಂತರ ಇಬ್ಬರು ಜೀತಗಾರರು ಯಾರೋ ಕುರುಡರು ಯಾರೋ ತಿಳಿದುಹೋಗಿದೆ ಅಲ್ಲವೆ! ಈ ಕಥೆ ಮೂರು ಆತ್ಮಗಳ ಸ್ಥಿತಿಯನ್ನು ತಿಳಿಸುವುದಾಗಿದೆ.

**ನಿನ್ನ ದೇಹದಲ್ಲಿ ನಿನ್ನ ವಿಳಾಸ ನಿನಗೆ ತಿಳಿದಿದೆಯಾ?**

## 34. ಅವರು ಬರೀ ಇಪ್ಪತ್ತೈದು, ಇಪ್ಪತ್ತಾರು. ಅವರು ಯಾರು?

ಪರಮಾತ್ಮ ಸೃಷ್ಠಿಯೆಲ್ಲವನ್ನು ತನ್ನ ಪ್ರಕೃತಿಗೆ ಒಪ್ಪಿಸಿದ್ದಾನೆ. ಪ್ರಕೃತಿಯೇ ಜೀವರಾಶಿಗಳನ್ನು ಹುಟ್ಟುವಂತೆ, ಜೀವಿಸುವಂತೆ, ಸಾಯುವಂತೆ ಮಾಡುತ್ತಿದೆ. ಸೃಷ್ಠಿಯನ್ನು ಸೃಷ್ಠಿಯಲ್ಲಿರುವ ಜೀವರಾಶಿಗಳನ್ನು ದೇವರು ಪ್ರಕೃತಿಗೆ ಒಪ್ಪಿಸಿ, ತಾನು ಏನು ಮಾಡದವನಾಗಿ ಇದ್ದಾನೆ. ಜಗತ್ತಿನಲ್ಲಿನ ಸಮಸ್ತ ಕಾರ್ಯಗಳನ್ನು ಪ್ರಕೃತಿಯೇ ಮಾಡುತ್ತಿದೆ. ಪ್ರಕೃತಿ ನಮಗೆ ಐದು ಭಾಗಗಳಾಗಿ ಕಾಣಿಸುತ್ತಿದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳ ಪ್ರಕೃತಿ ತನ್ನ ಭಾಗಗಳನ್ನು ಉಪಯೋಗಿಸಿ ಮಾನವ ಶರೀರವನ್ನು ತಯಾರು ಮಾಡಿದೆ. ಆ ಕಾರ್ಯಕ್ರಮದಲ್ಲಿ ಪಂಚಭೂತಗಳು ಒಂದೊಂದು ಐದು ಭಾಗಗಳಾಗಿ ವಿಭಜನೆಯಾಗಿವೆ. ಹಾಗೆ ವಿಭಜನೆಯಾಗಿ 5x5=25 ಭಾಗಗಳು ತಯಾರಾಗಿವೆ. 24 ಭಾಗಗಳನ್ನು ಬಿಟ್ಟು, 25ನೇ ಭಾಗದಲ್ಲಿ ಒಂದರಲ್ಲಿ ಜೀವಾತ್ಮ ಬೆರೆತುಹೋಗಿದೆ.

ಆಕಾಶ ಶೂನ್ಯವಾಗಿರುತ್ತದೆ ಆದ್ದರಿಂದ ಆಕಾಶ ಭಾಗಗಳಲ್ಲಿ ಒಂದರಲ್ಲಿ ಬೆರೆತುಹೋದರೂ, ಜೀವಾತ್ಮ ಸ್ವಲ್ಪ ಪ್ರಕೃತಿ ವಾಸನೆ ಹೊಂದಿದ್ದಾನೆ. ದೇವರು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಜೀವಾತ್ಮ, ಆತ್ಮ, ಪರಮಾತ್ಮಗಳಾಗಿ ಇದ್ದಾನೆ. ಮೂರು ಆತ್ಮಗಳು ಬೇರೆಯಾಗಿ, ಪ್ರಕೃತಿ ಬೇರೆಯಾಗಿ ಇದ್ದರೆ, ಪ್ರಕೃತಿಯಿಂದ ತಯಾರಾದ ಶರೀರದಲ್ಲಿ ಆತ್ಮಗಳು ನಿವಾಸಿಸುವುದಕ್ಕೆ ಸಾಧ್ಯಪಡುವುದಿಲ್ಲ. ಆದರೇ ಜೀವಾತ್ಮ ಆಕಾಶವೊಂದರ ಅಂಶದಿಂದ ಬೆರೆತುಹೋಗುವುದರಿಂದ, ಶರೀರದಲ್ಲಿ ನಿವಾಸಿಸುವುದಕ್ಕೆ ಸಾಧ್ಯವಾಗಿದೆ. ಇಲ್ಲದಿದ್ದರೆ ಜೀವಿಯು ಪ್ರತಿಮೆ ಶರೀರದಿಂದ ಹೊರಗೆ ಬರುವಂತೆ, ಮನುಷ್ಯನ ಶರೀರದಿಂದ ಯಾವಾಗೆಂದರೇ ಆಗ ಹೊರಗೆ ಬರಬಲ್ಲನು. ಹಾಗಲ್ಲದೆ ಇರುವುದಕ್ಕೆ ಆಕಾಶ ಭಾಗದಿಂದ ಜೀವಿಯು ಅಂಟಿಸಲ್ಪಟ್ಟಿದ್ದಾನೆ. ಜೀವಿಯೊಂದಿಗೆ ಆತ್ಮ ಇರುವುದರಿಂದ ಆತ್ಮ ಕೂಡಾ ಶರೀರದಲ್ಲಿಯೇ ಜೀವಿಯೊಂದಿಗೆ ಸಹ ಸಿಕ್ಕಿಕೊಂಡಿದೆ. ಶರೀರದಲ್ಲಿ ಪ್ರಕೃತಿಯಿಂದ ತಯಾರಾದ ಭಾಗಗಳು ಒಟ್ಟು 24 ಆಗಿದ್ದು, 25ನೇ ಯವನಾಗಿ ಜೀವಾತ್ಮ ಇದೆ. ಹಾಗೆಯೇ 26ನೇಯವನಾಗಿ ಆತ್ಮಯಿದೆ. ಶರೀರದಲ್ಲಿ ಪ್ರಕೃತಿ ತತ್ತ್ವಗಳ ಭಾಗಗಳು 24 ಆಗಿದ್ದು, ಆತ್ಮ ತತ್ತ್ವ ಭಾಗಗಳು ಎರಡು ಮಾತ್ರ ಇವೆ. ಆದ್ದರಿಂದ ಮೇಲಿನ ಒಗಟಿನಲ್ಲಿ ಅವರು ಬರೀ ಇಪ್ಪತ್ತೈದು, ಇಪ್ಪತ್ತಾರು ಎಂದು ಹೇಳಿದ್ದಾರೆ. 25, 26ರಾಗಿ ಇರುವವರು ಯಾರೊ ಈಗ ತಿಳಿದಿದೆಯಾ! ಈ ಕಥೆಯಲ್ಲಿನ ಪ್ರಶ್ನೆ ಜೀವಾತ್ಮ, ಆತ್ಮಗಳನ್ನು ಕುರಿತು ಹೇಳಿರುವುದೆಂದು ತಿಳಿದುಹೋಗಿದೆ.

**ದೇಹದಲ್ಲಿ ನೀನು ಮೂರು ಆದರೇ, ಆತ್ಮ ಆರಾಗುತ್ತದೆ.**

## 35. ನಾಲ್ವರೊಂದಿಗೆ ಸಾವು ಮದುವೆಗೆ ಸಮಾನ, ಎಂದರೆ ಏನು?

ಮದುವೆ ಎಂದರೇ ದೇವರೆಂದು, ಮಧುಮಗ, ಮಧುಮಗಳು ಎಂದರೇ ದೇವರ ಮಗಳು, ದೇವರ ಮಗನೆಂದು ಹೇಳಿಕೊಂಡಿದ್ದೇವೆ. ಮದುವೆ ದೇವರಾದಾಗ, ಮದುವೆಗೆ ಸಮಾನ ಎಂದರೇ ದೇವರಿಗೆ ಸಮಾನವಾಗಿ ಬೆರೆತು ಹೋಗುವುದೆಂದು ಅರ್ಥ. ಅದನ್ನೇ ಮುಕ್ತಿ ಇಲ್ಲವೆ ಮೋಕ್ಷ ಎನ್ನುತ್ತೇವೆ.

ಈಗ ನಮಗೆ ತಿಳಿಯಬೇಕಾಗಿರುವುದು ನಾಲ್ವರೊಂದಿಗೆ ಸಾಯುವುದು ಎಂದರೇ ಏನು? ನಮ್ಮ ಶರೀರದಲ್ಲಿ ಜೀವಿಯು ನಾಲ್ಕು ವಿಧಗಳ ಹೆಸರುಗಳು ಹೊಂದಿದ್ದಾನೆ. ಒಂದು ತಾಮಸನು, ಎರಡು ರಾಜಸನು, ಮೂರು ಸಾತ್ತ್ವಿಕನು, ನಾಲ್ಕು ಯೋಗಿ, ಈ ನಾಲ್ಕು ಹೆಸರುಗಳು ಆಯಾ ಸ್ಥಾನಗಳನ್ನನುಸರಿಸಿ ಬಂದಿರುವವು. ಜೀವಿಯು ನಿವಾಸಿಸುವ ಗುಣಚಕ್ರ ಒಟ್ಟು ನಾಲ್ಕು ಭಾಗಗಳಾಗಿ ಇದೆ. ಅದರಲ್ಲಿ ಒಂದು ತಾಮಸ, ಎರಡು ರಾಜಸ, ಮೂರು ಸಾತ್ತ್ವಿಕ, ನಾಲ್ಕು ಯೋಗವೆನ್ನುವ ಹೆಸರುಗಳು ಹೊಂದಿವೆ. ಜೀವಿಯು ಯಾವ ಸ್ಥಾನದಲ್ಲಿ ಇದ್ದರೆ, ಆ ಸ್ಥಾನವೊಂದರ ಹೆಸರು ಅವನಿಗೆ ಬರುತ್ತದೆ. ಮೊದಲಿರುವ ಮೂರು ಭಾಗಗಳಲ್ಲಿ ಗುಣಗಳಿವೆ, ಒಂದೊಂದು ಭಾಗದಲ್ಲಿ 12 ಗುಣಗಳು ಇವೆ. ಮೂರು ಗುಣ ಭಾಗಗಲ್ಲಿನ 36 ಗುಣಗಳನ್ನು ಮಾಯೆ ಎನ್ನುತ್ತಿದ್ದೇವೆ. ಇನ್ನು ನಾಲ್ಕನೆಭಾಗವಾದ ಯೋಗ ಭಾಗದಲ್ಲಿ ಗುಣಗಳು ಇಲ್ಲ. ಈ ಭಾಗದಲ್ಲಿ ಮೂರು ಗುಣಭಾಗಗಳಿಗಿಂತ ಹೆಚ್ಚಾಗಿ ಕಾಲ ಕಳೆದ ಯೋಗಿ, ತನ್ನ ಕರ್ಮ ಗಳೆಲ್ಲವನ್ನು ನಾಶ ಮಾಡಿಕೊಳ್ಳಬಲ್ಲನು. ಆಗ ನಾಲ್ಕನೆ ಭಾಗವನ್ನು ಕೂಡಾ ಬಿಟ್ಟು ಜೀವಿಯು ದೇವರೊಳಗೆ ಬೆರೆತುಹೋಗುವನು. ಈ ವಿಧವಾಗಿ ನಾಲ್ಕು ಭಾಗಗಳನ್ನು ದಾಟಿದವನು ದೇವರಲ್ಲಿ ಐಕ್ಯವಾಗುತ್ತಾನೆನ್ನುವ ಮಾತನ್ನು ಸ್ವಲ್ಪ ಬದಲಿಸಿ "ನಾಲ್ವರೊಂದಿಗೆ ಸಾವು ಮದುವೆಗೆ ಸಮಾನ" ಎಂದು ಒಗಟಿನಲ್ಲಿ ಹೇಳಿದ್ದಾರೆ. ಮದುವೆಗೆ ಸಮಾನವೆಂದರೇ ದೇವರಲ್ಲಿ ಸೇರಿಹೋಗುವುದೆಂದು ಅರ್ಥ. ಹಾಗೆ ದೇವರನ್ನು ಸೇರುವುದಕ್ಕೆ ನಾಲ್ಕು ಭಾಗಗಳನ್ನು ಬಿಡುವುದಕ್ಕೆ ಸಿದ್ಧವಾಗಬೇಕೆಂದು ಈ ಕಥೆಯ ಸಾರಾಂಶ.

**ನೀನು ಕರ್ಮಕ್ಕೆ ಬಾಕೀ ಇದ್ದೀಯಾ. ಧನಿಕನಾಗು ಎನ್ನುತ್ತಿದ್ದೇನೆ.**

## 36. ಮಾಡುವುದು ಒಬ್ಬನಾದರೇ, ಮೇಯುವುದು ಇನ್ನೊಬ್ಬನು. ಯಾರು?

ಒಡವೆಯೊಬ್ಬರದ್ದು ಶೋಕಿಯೊಬ್ಬರದ್ದು ಎನ್ನುವಂತೆ, ಮಾಡುವುದು ಒಬ್ಬನಾದರೆ ಅದರ ಫಲಿತವನ್ನು ಅನುಭವಿಸುವವನು ಮತ್ತೊಬ್ಬನು ಎಂದು

ಈ ಕಥೆಯಲ್ಲಿ ಹೇಳಿದ್ದಾರೆ. ಪ್ರಪಂಚದಲ್ಲಿ ಕರ್ಮವನ್ನು ಮಾಡಿಕೊಂಡವನು ಕೆಲಸ ಮಾಡುತ್ತಿರುವಾಗ, ಕರ್ಮಗಳಿಲ್ಲದವನು ಕೆಲಸ ಮಾಡುವುದಿಲ್ಲವೆಂದು ಕೇಳಿದ್ದೇವೆ. ಆದರೇ ಅದಕ್ಕೆ ವಿರುದ್ಧವಾಗಿ ಕರ್ಮಗಳು ಇಲ್ಲದವನು ಕೆಲಸ ಮಾಡುತ್ತಿರುವಾಗ, ಕರ್ಮಗಳಿರುವವನು ಕೆಲಸವನ್ನು ಮಾಡುತ್ತಿಲ್ಲ. ಇದನ್ನು ಕೇಳಿದವರು ಅದು ಹೇಗೆ ಸಾಧ್ಯವಾಗುತ್ತದೆ? ಕರ್ಮಗಳಿರುವವನು ಕೆಲಸ ಮಾಡುವುದು, ಕರ್ಮಗಳು ಇಲ್ಲದವನು ಕೆಲಸ ಮಾಡದಂತಿರುವುದು ಎಂದರೇ ಸರಿಹೋಗುತ್ತದೆ. ಆದರೆ ನೀವು ಅದಕ್ಕೆ ವಿರುದ್ಧವಾಗಿ ಹೇಳುತ್ತಿದ್ದೀರೇನು ಎಂದು ಯಾರಾದರೂ ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಯಾರು ಎಷ್ಟು ಮಾಡುತ್ತಿದ್ದಾರೆನ್ನುವುದು ಮುಖ್ಯವಲ್ಲ, ಯಾರು ಎಷ್ಟು ಅನುಭವಿಸುತ್ತಿದ್ದಾರೆನ್ನುವುದು ಮುಖ್ಯ. ಕಡಿಮೆ ಕರ್ಮ ಇರುವವನು ಹೆಚ್ಚು ಕೆಲಸ ಮಾಡಿದರೂ ಕಡಿಮೆ ಅನುಭವಿಸುತ್ತಾನೆ. ಹೆಚ್ಚಿನ ಕರ್ಮ ಇರುವವನು ಕಡಿಮೆ ಕೆಲಸಮಾಡಿದರೂ ಹೆಚ್ಚಾಗಿ ಅನುಭವಿಸಬಹುದು. ಈ ಸೂತ್ರದ ಪ್ರಕಾರ ನಮ್ಮ ಶರೀರದಲ್ಲಿ ಜೀವಾತ್ಮ ಹೆಚ್ಚಾಗಿ ಕರ್ಮವನ್ನು ಮಾಡಿಕೊಂಡು ಕಡಿಮೆ ಕೆಲಸಮಾಡಿ ಹೆಚ್ಚಾಗಿ ಅನುಭವಿಸುತ್ತಿದೆ. ಇನ್ನು ಆತ್ಮ ವಿಷಯಕ್ಕೆ ಬಂದರೇ ಆತ್ಮಗೆ ಕರ್ಮವೇ ಇಲ್ಲ. ಆದರೂ ಹೆಚ್ಚಾಗಿ ಕೆಲಸ ಮಾಡುತ್ತಿದೆ, ಏನು ಅನುಭವಿಸುತ್ತಿಲ್ಲ.

ಅನುಭವಗಳನ್ನು ಪಕ್ಕಕ್ಕಿಟ್ಟು ಮೇಲ್ನೋಟಕ್ಕೆ ಕಾಣಿಸುವುದು ನೋಡಿದರೆ ಶರೀರದಲ್ಲಿ ಆತ್ಮ ಕೆಲಸಮಾಡುತ್ತಿರುವಾಗ, ಜೀವಾತ್ಮ ಏನು ಮಾಡದಂತೆ ಅನುಭವಿಸುತ್ತಿರುವಂತೆ ಕಾಣಿಸುತ್ತದೆ. ಕಾಣಿಸುವುದನ್ನನುಸರಿಸಿ "ಮಾಡುವುದು ಒಬ್ಬನಾದರೆ ಮೇಯುವುದು ಇನ್ನೊಬ್ಬನು" ಎಂದು ಈ ಒಗಟಿನಲ್ಲಿ ಹೇಳಿದ್ದಾರೆ. ಆದರೇ ಇಲ್ಲಿ ಕೆಲಸ ಮಾಡುವುದು ಮುಖ್ಯವಾ? ಅನುಭವಿಸುವುದು ಮುಖ್ಯವಾ? ಎಂದು ತರ್ಕಿಸಿ ನೋಡಿದರೆ ಅನುಭವವೇ ಮುಖ್ಯವೆಂದು ತಿಳಿಯುತ್ತಿದೆ. ಎಷ್ಟು ಮಾಡಿಕೊಂಡವನು ಅಷ್ಟು ಅನುಭವಿಸುತ್ತಾನೆನ್ನುವ ಮಾತಿನ ಪ್ರಕಾರ, ಜೀವಾತ್ಮಗೆ ಕರ್ಮ ಹೆಚ್ಚಾಗಿದೆ ಆದ್ದರಿಂದ ಹೆಚ್ಚಾಗಿ ಅನುಭವಿಸುತ್ತಿದೆಯೆಂದು

ಹೇಳಬಹುದು. ಈ ಸೂತ್ರವನ್ನು ಬಿಟ್ಟು ನೋಡಿದರೆ ಮಾಡುವುದು ಒಬ್ಬನಾದರೇ, ಮೇಯುವುದು ಇನ್ನೊಬ್ಬನೆನ್ನುವಂತಿರುತ್ತದೆ.

**ತಲೆಮೇಲೆ ಹೇನು, ತಲೆಯೊಳಗೆ ಕರ್ಮ ನಿನ್ನನ್ನು ಪೀಡಿಸುತ್ತಲೇ ಇರುತ್ತವೆ.**

## 37. ನನಗೂ ಇಲ್ಲ, ನಿನಗೂ ಇಲ್ಲ, ಊರಿಗೊಬ್ಬ ದೇವರಾ! ಇವರು ಯಾರು?

ಒಂದು ಊರಿನಲ್ಲಿ ಒಂದು ದೇವಾಲಯವಿದೆ. ಅದರ ಪೂಜಾರಿ ದೇವಾಲಯ ಪ್ರಾಂಗಣದಲ್ಲಿಯೇ ಪಕ್ಕದಕೋಣೆಯಲ್ಲಿ ಇದ್ದಾನೆ. ರಾತ್ರಿಸಮಯ ಗುಡಿಯಲ್ಲಿ ಪೂಜಾರಿ, ದೇವತಾ ಪ್ರತಿಮೆ ಹೊರತು ಯಾರೂ ಇರುವುದಿಲ್ಲ. ಅದು ವೀರಭದ್ರ ದೇವಾಲಯ. ವೀರಭದ್ರ ಸ್ವಾಮಿ ಆಗಾಗ ಯಾರ ಮೈಮೇಲಾದರೂ ಸೂಕ್ಷ್ಮವಾಗಿ ಬಂದು ಮಾತನಾಡುತ್ತಿದ್ದನು. ವೀರಭದ್ರಸ್ವಾಮಿ ಮನುಷ್ಯನೊಳಗೆ ಬಂದು ಮಾತನಾಡುವುದರಿಂದ ಆ ಗುಡಿಗೆ ಹೆಚ್ಚುಜನ ಭಕ್ತರು ಬರುತ್ತಿದ್ದರು. ವೀರಭದ್ರಸ್ವಾಮಿಗೆ ಕಾಣಿಕೆಗಳು ಕೂಡಾ ಹೆಚ್ಚಾಗಿ ಬರುತ್ತಿದ್ದವು. ರಾತ್ರಿಸಮಯ ಆ ಗುಡಿಯಲ್ಲಿ ಪೂಜಾರಿ ಹೊರತು ಯಾರೂ ಇರುವುದಿಲ್ಲವೆಂದು ತಿಳಿದುಕೊಂಡ ಒಬ್ಬ ಕಳ್ಳ, ಆ ಗುಡಿಯಲ್ಲಿ ಒಂದು ದಿನ ಕಳ್ಳತನ ಮಾಡಬೇಕೆಂದುಕೊಂಡಿದ್ದಾನೆ. ಅದಕ್ಕೆ ತಕ್ಕ ಏರ್ಪಾಡುಗಳೆಲ್ಲವೂ ಮೊದಲೇ ಮಾಡಿಕೊಂಡಿದ್ದಾನೆ. ಒಂದು ದಿನ ರಾತ್ರಿಸಮಯ ಆಲಯದೊಳಗೆ ಕಳ್ಳ ಪ್ರವೇಶಿಸಿದ್ದಾನೆ. ಆ ಗುಡಿಯಲ್ಲಿ ವೀರಭದ್ರನ ಒಡವೆಗಳೆಲ್ಲವನ್ನು ತೆಗೆದುಕೊಂಡ ಕಳ್ಳ ಪಕ್ಕದಲ್ಲಿಯೇ ಇರುವ ರೇಷ್ಮೆ ವಸ್ತ್ರಗಳನ್ನು ಕೂಡಾ ಮೂಟೆಕಟ್ಟಿಕೊಂಡಿದ್ದಾನೆ. ನಂತರ ಪೂಜಾರಿ ಮನೆಯೊಳಗೆ ನುಗ್ಗಿ ಪೂಜಾರಿ ಬಟ್ಟೆಗಳನ್ನು ಕೂಡಾ ಮೂಟೆಕಟ್ಟಿಕೊಂಡಿದ್ದಾನೆ. ನಂತರ ಕೊನೆಯದಾಗಿ ಗುಡಿಯೊಳಗೆ ಬಂದುನೋಡಿದಾಗ ಪೂಜಾರಿ ಒಳ್ಳೆಯ ರೇಷ್ಮೆಪಂಚೆಯನ್ನು ಕಟ್ಟಿಕೊಂಡು ಮಲಗಿರುವಾಗ, ಪ್ರತಿಮೆಗು ಕೂಡಾ ಒಳ್ಳೆಯ ರೇಷ್ಮೆವಸ್ತ್ರ ಇರುವುದನ್ನು ನೋಡಿದ್ದಾನೆ. ಆ ಕಳ್ಳನಿಗೆ ಅವುಗಳನ್ನು ಕೂಡಾ ಬಿಡಲು ಬುದ್ಧಿ ಹುಟ್ಟಲಿಲ್ಲ. ಮೊದಲು ಪ್ರತಿಮೆಗಿರುವ ರೇಷ್ಮೆ ವಸ್ತ್ರವನ್ನು ಬಿಚ್ಚಿಕೊಂಡಿದ್ದಾನೆ.

ನಂತರ ಗಾಢ ನಿದ್ರೆಯಲ್ಲಿರುವ ಪೂಜಾರಿ ಪಂಚೆಯನ್ನು ಕೂಡಾ ನಿಧಾನವಾಗಿ ಬಿಚ್ಚಿಕೊಂಡಿದ್ದಾನೆ. ಬಂದಿದಕ್ಕೆ ಕೆಲಸ ಚೆನ್ನಾಗಿಯೇ ಆಗಿದೆಯೆಂದುಕೊಂಡ ಕಳ್ಳ, ವೀರಭದ್ರಸ್ವಾಮಿಗೆ ನಮಸ್ಕಾರ ಮಾಡಿ ಹೋದನು.

ಬೆಳಗಾಗದ ಮುನ್ನವೇ ಐದುಗಂಟೆಗಳಿಗೇ ಪೂಜಾರಿ ಎದ್ದು, ತಾನು ಚಡ್ಡಿಯೊಂದಿಗೆ ಮಾತ್ರ ಇರುವುದು ನೋಡಿಕೊಂಡು, ನನ್ನ ಪಂಚೆ ಎಲ್ಲಿಗೆ ಹೋಗಿದೆ ಎಂದು ಅಂದುಕೊಂಡಿದ್ದಾನೆ. ನಂತರ ನಿದ್ರೆಯಲ್ಲಿ ಬಾತ್‌ರೂಮ್‌ಗೆ ಹೋದಾಗ ಅಲ್ಲಿಯೇ ಬಿಚ್ಚಿ ಹೋದಂತಿದೆ, ನಿದ್ರೆಮತ್ತಿನಲ್ಲಿ ನೋಡಿಕೊಳ್ಳಲಿಲ್ಲ ಎಂದುಕೊಂಡಿದ್ದಾನೆ. ಅಷ್ಟರಲ್ಲಿ ವೀರಭದ್ರನ ಕಡೆ ನೋಡಿದ್ದಾನೆ. ವೀರಭದ್ರನ ಪಂಚೆಕೂಡಾ ಇಲ್ಲ. ಆಗ ಪೂಜಾರಿಗೆ ಕಳ್ಳತನ ನಡೆದಿದೆಯೇನೊ ಎಂದು ಅನುಮಾನ ಬಂದಿದೆ. ತಕ್ಷಣ ಗುಡಿಯೊಳಗೆ ಹೋಗಿ ವೀರಭದ್ರನ ಒಡವೆಗಳು ಕೂಡಾ ಹೋದಂತೆ ಗ್ರಹಿಸಿದ್ದಾನೆ. ನಂತರ ತನ್ನ ಮನೆಯಲ್ಲಿ ನೋಡಿದ್ದಾನೆ. ಅಲ್ಲಿ ಕೂಡಾ ಎಲ್ಲಾ ಹೋದಂತೆ ತಿಳಿದುಕೊಂಡು ಗುಡಿಯಲ್ಲಿನ ದೇವರು, ತಾನು ಇಬ್ಬರೂ ಕೊಳ್ಳೆಗೊಳಗಾದಂತೆ ಗುರುತಿಸಿದ್ದಾನೆ. ನಂತರ ಸಾಯಂಕಾಲ ವೀರಭದ್ರಸ್ವಾಮಿ ಬೇರೆ ಮನುಷ್ಯನೊಳಗೆ ಸೂಕ್ಷ್ಮವಾಗಿ ಬಂದು ತನ್ನ ಒಡವೆಗಳೆಲ್ಲ ಹೋಗಿವೆಯೆಂದು, ತನ್ನ ಬಟ್ಟೆಗಳೆಲ್ಲ ಹೋಗಿವೆಯೆಂದು ಹೇಳಿ ಹೇಳಿ ಅತ್ತನು. ಅದು ನೋಡಿದ ಪೂಜಾರಿಗೆ ಆಶ್ಚರ್ಯವಾಗಿದೆ. ಇಷ್ಟಕ್ಕೂ ವೀರಭದ್ರಸ್ವಾಮಿ ಅಳುತ್ತಿದ್ದಾನಾ ಇಲ್ಲವೆ ಸೂಕ್ಷ್ಮ ಬಂದಂತೆ ಮನುಷ್ಯನೇ ನಟಿಸುತ್ತಿದ್ದಾನಾ ಎಂದು ಪೂಜಾರಿಗೆ ಅನುಮಾನ ಬಂದು "ಯಾರು ನೀನು ಏಕೆ ಅಳುತ್ತಿದ್ದೀಯಾ" ಎಂದು ಕೇಳಿದನು. ಆಗ ವೀರಭದ್ರಸ್ವಾಮಿ ಇನ್ನೂ ಜೋರಾಗಿ ಅರಚುತ್ತಾ ನನ್ನ ಒಡವೆಗಳು ಹೋಗಿವೆ ನನ್ನ ಪಂಚೆಗಳು ಹೋಗಿವೆಯೆಂದು ದೀರ್ಘ ತೆಗೆಯುತ್ತಾ ಹೇಳಿದನು. ಆ ಮಾತಿನಿಂದ ಈತನು ವೀರಭದ್ರಸ್ವಾಮಿಯೇ ಎಂದು ಪೂಜಾರಿಗೆ ಅರ್ಥವಾಗಿದೆ. ಅಷ್ಟರಲ್ಲಿಯೇ ವೀರಭದ್ರಸ್ವಾಮಿ ಕಳ್ಳನನ್ನು ಬೈಯ್ಯುವುದಕ್ಕೆ ಶುರುಮಾಡಿ ಅವನ ಕೈಯಿಗಳು ಬಿದ್ದುಹೋಗಲಿ, ಅವನು ಕಟ್ಟಿಕೊಂಡ ಪಂಚೆಯನ್ನು ಕೂಡಾ ಕಸಿದುಕೊಂಡು ಹೋಗಿದ್ದಾನೆ ಎಂದು ಹೇಳುತ್ತಲೇ, ಪೂಜಾರಿಗೆ ವೀರಭದ್ರಸ್ವಾಮಿ ಮೇಲೆ ಕೋಪಬಂದು "ಕಟ್ಟಿಕೊಂಡ

ಪಂಚೆ ನನಗೂ ಇಲ್ಲ, ನಿನಗೂ ಇಲ್ಲ ಸುಮ್ಮನಿರು ದೇವರೆ!" ಎಂದನಂತೆ, ಅದಕ್ಕೆ ವೀರಭದ್ರಸ್ವಾಮಿ ತೂಗುತ್ತಾ "ನನ್ನದು ರೇಷ್ಮೆಪಂಚೆ ಕಣೋ" ಎಂದನು. ಅದಕ್ಕೆ ಪೂಜಾರಿ "ನನ್ನದು ರೇಷ್ಮೆ ಪಂಚೆಯೇ, ನಾನು ನಿನ್ನಂತೆ ಅಳುತ್ತಿದ್ದೇನಾ, ಅಷ್ಟಕ್ಕೂ ನನಗೆ ತಿಳಿಯದೇ ಕೇಳುತ್ತೇನೆ. ಯಾರೊ ಕಳ್ಳಬಂದು ಗುಡಿಯಲ್ಲಿನ ಒಡವೆಯನ್ನು ದೋಚಿಕೊಂಡು ಹೋಗುತ್ತಿದ್ದರೆ ನೀನೇನು ಮಾಡುತ್ತಿದ್ದೆ. ಈಗ ಅಳುವ ಬದಲು ಆಗ ಕಳ್ಳನನ್ನು ಒದ್ದು ಓಡಿಸಬಾರದಾ?" ಎಂದು ಹೇಳಿದನು. ಅದಕ್ಕೆ ವೀರಭದ್ರಸ್ವಾಮಿ "ನಾನು ಗುಡಿಯಲ್ಲಿ ಇಲ್ಲದಿರುವಾಗ ಬಂದಿದ್ದಾನೆ ಕಣೋ" ಎಂದಾಗ ಪೂಜಾರಿ "ಗುಡಿಯಲ್ಲಿ ಇಲ್ಲದಂತೆ ಎಲ್ಲಿಗೆ ಹೋಗಿದ್ದೀಯಾ?" ಎಂದು ಕೇಳಿದಾಗ! ಆಗ ವೀರಭ್ರಸ್ವಾಮಿ ಹೀಗೆ ಹೇಳಿದ್ದಾನೆ. "ಊರಿನಲ್ಲಿ ಮದುವೆ ಆಗಿದೆಯಲ್ಲ! ಏನಾದರೂ ಉಳಿದಿದ್ದರೆ ತಿಂದುಬರೋಣ ವೆಂದು ಹೋಗಿದ್ದೆ ಕಣೋ" ಆ ಮಾತು ಕೇಳುತ್ತಲೇ ಪೂಜಾರಿಗೆ ಪೂರ್ತಿ ಕೋಪಬಂದು "ನಿನ್ನನ್ನು ಗುಡಿಯಲ್ಲಿನ ದೇವತೆ ಎಂದುಕೊಳ್ಳಬೇಕಾ ಅಥವಾ ಊರಿನಲ್ಲಿ ದೆವ್ವ ಎಂದುಕೊಳ್ಳಬೇಕಾ" ಎಂದು ಹೇಳಿದ್ದಾನೆ. ಆಗಿನಿಂದ ತನ್ನ ಹೊಟ್ಟೆಪಾಡಿಗಾಗಿ ಗುಡಿಯಲ್ಲಿ ಪೂಜೆ ಮಾಡುತ್ತಿದ್ದನು. ಅಷ್ಟೇ ಹೊರತು ವೀರಭ್ರಸ್ವಾಮಿಗೆಂದು ಮಾಡದಂತಿದ್ದನು.

ಇದು ಒಂದು ಗುಡಿಯಲ್ಲಿನ ಕಥೆಯಾಗಿದ್ದು ಹೊರಗಿನ ಗುಡಿಯಲ್ಲಿ ಪೂಜಾರಿ, ವೀರಭದ್ರಸ್ವಾಮೀ ಇಬ್ಬರಿರುವಂತೆ ನಮ್ಮ ಶರೀರವೆನ್ನುವ ಗುಡಿಯಲ್ಲಿ ಆತ್ಮ, ಜೀವಾತ್ಮ ಎನ್ನುವ ಇಬ್ಬರು ಇದ್ದಾರೆ. ಹೊರಗಿನ ಗುಡಿಯಲ್ಲಿ ಪೂಜಾರಿ ಕೆಲಸ ಮಾಡುತ್ತಿರುವಾಗ, ಪ್ರತಿಮೆಯಾಗಿರುವ ವೀರಭದ್ರಸ್ವಾಮೀ ಕೆಲಸ ಮಾಡದಂತೆ ಗುಡಿಯೆಲ್ಲದಕ್ಕು ನಾನೇ ದೇವರೆಂದು ಅಂದುಕೊಳ್ಳುತ್ತಿದ್ದನು. ಹಾಗೆಯೇ ಶರೀರ ಆಲಯದಲ್ಲಿ ಕೂಡಾ ಎಲ್ಲಾ ವೇಳೆಯಲ್ಲಿ ಕೆಲಸ ಮಾಡುವ ಆತ್ಮ ಸುಮ್ಮನೆ ಇರುವಾಗ, ಕೆಲಸ ಮಾಡದೆ ಒಂದುಕಡೆ ಕದಲದೆ ಇರುವ ಜೀವಾತ್ಮ ಮಾತ್ರ ಶರೀರವೆಲ್ಲದಕ್ಕು ತಾನೇ ದೊಡ್ಡವನೆಂದು ಅಂದುಕೊಳ್ಳುವುದೇ ಅಲ್ಲದೆ, ತನ್ನಿಂದಲೇ ಎಲ್ಲಾ ಕೆಲಸಗಳು ನಡೆಯುತ್ತಿವೆಯೆಂದು ಅಂದು ಕೊಳ್ಳುತ್ತಿದ್ದಾನೆ. ಗುಡಿಯಲ್ಲಿ ಪೂಜಾರಿ ಅಳದಿದ್ದರೂ ದೇವತೆ ಅತ್ತಂತೆ, ಶರೀರದಲ್ಲಿ

ಆತ್ಮ ಬಾಧೆ ಪಡದಿದ್ದರೂ, ಜೀವಾತ್ಮ ಚಿಕ್ಕ ನಷ್ಟಕ್ಕು ಕೂಡಾ ಬಾಧೆಪಡುತ್ತಿದ್ದಾನೆ. ಹಾಗೆಯೇ ಸ್ವಲ್ಪಮಟ್ಟಿನ ಲಾಭಕ್ಕೆ ಸಂತೋಷಪಡುತ್ತಿದ್ದಾನೆ. ಈ ವಿಧವಾಗಿ ಗುಡಿಯಲ್ಲಿನ ಪೂಜಾರಿ ಎಲ್ಲಾ ಕೆಲಸಗಳನ್ನು ಮಾಡುತ್ತಿದ್ದರೂ. ಯಾವ ಕೆಲಸವನ್ನು ಮಾಡದ ದೇವತೆ ಎಲ್ಲಾ ನಾನೇ ಮಾಡಿದ್ದೇನೆಂದು ಕೊಳ್ಳುವಂತೆ, ಶರೀರದಲ್ಲಿ ಕೂಡಾ ಆತ್ಮ ಎಲ್ಲಾ ಕೆಲಸಗಳು ಮಾಡುತ್ತಿದ್ದರೂ. ಯಾವ ಕೆಲಸ ಮಾಡದ ಜೀವಾತ್ಮ ಎಲ್ಲಾ ಕೆಲಸಗಳು ನಾನೇ ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಆದ್ದರಿಂದ ಒಂದೊಂದುಸಲ ಆತ್ಮವೇ ಜೀವಾತ್ಮಗೆ ಬುದ್ಧಿ ಹೇಳಿದಂತೆ ಈ ಒಗಟಿನಲ್ಲಿ "ನನಗೂ ಇಲ್ಲ, ನಿನಗೂ ಇಲ್ಲ, ಸುಮ್ಮನಿರು ದೇವರೇ!" ಎಂದು ಹೇಳಿ ಆ ವಿಷಯ ನಮಗೆ ಅರ್ಥವಾಗುವಂತೆ ಯಾರು ಎಂದು ಪ್ರಶ್ನಿಸಿ ಕೇಳಿದ್ದಾರೆಂದು ತಿಳಿಯಬೇಕು.

**ಸೃಷ್ಟಿಕರ್ತ ಕೋಡ್ 963, ಮಾಯೆ (ಸಾತಾನ್) ಕೋಡ್ 666.**

## 38. ಇರುವವರೆಲ್ಲರಿಗಿಂತಲೂ ಚಿಕ್ಕವನೇ ಮೇಲು, ಯಾರು ಅವನು?

ಯಾವ ತಂದೆಗಾದರೂ ಚಿಕ್ಕ ಮಗನ ಮೇಲೆಯೇ ಪ್ರೀತಿ ಹೆಚ್ಚಾಗಿರುತ್ತದೆ. ಯಾರಾದರೂ ಏಕೆ ಹಾಗೆ ಚಿಕ್ಕ ಮಗನನ್ನು ಹೆಚ್ಚಿನ ಪೀತಿಯಿಂದ ನೋಡುತ್ತೀಯಾ ಎಂದು ಕೇಳಿದರೆ ಯಾರಾದರೂ ಹೇಳುವ ಸಮಾಧಾನ ಏನೆಂದರೇ! "ಇರುವ ವರೆಲ್ಲರಿಗಿಂತ ಚಿಕ್ಕವನೇ ಮೇಲು" ಎಂದು ಅನ್ನುತ್ತಾರೆ. ಪ್ರಪಂಚದಲ್ಲಿ ಯಾರು ಹೇಗೆ ಹೇಳಿಕೊಂಡರು ಆಧ್ಯಾತ್ಮಿಕ ರೀತಿಯಲ್ಲಿ ಜ್ಞಾನವನ್ನು ಅನುಸರಿಸಿ ನಾವು ಏನು ಹೇಳಬೇಕೊ ನೋಡಿಕೊಳ್ಳೋಣ. ಮನುಷ್ಯ ಎಂದರೇ ಮೇಲ್ನೋಟಕ್ಕೆ ಕಾಣಿಸುವ ಸ್ಥೂಲ ಶರೀರದೊಂದಿಗೆ ಕೂಡಾ ಹೇಳಿಕೊಳ್ಳದೆ ಒಳಗಿರುವ ಜೀವಾತ್ಮದ ವರೆಗೇ ಹೇಳಿಕೊಂಡರೆ ಆಧ್ಯಾತ್ಮಿಕವಾಗುತ್ತದೆ. ಆದ್ದರಿಂದ ಒಳಗೆ ಜೀವಿಯು ಎಲ್ಲಿದ್ದಾನೆ? ಯಾವ ಆಕಾರದಿಂದ ಇದ್ದಾನೆ? ಯಾವ ಹೆಸರಿನಿಂದಿ ದ್ದಾನೆ? ಯಾವ ಕೆಲಸವನ್ನು ಮಾಡುತ್ತಿದ್ದಾನೆ? ಎಂದು ಪ್ರಶ್ನಿಸಿಕೊಂಡು ಆ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಿದರೆ ಅದೇ ಆಧ್ಯಾತ್ಮಿಕ ವಾಗುತ್ತದೆ. ಅಂಥಾದ್ದೇ

ಈಗ ನೋಡಿದರೆ ಜೀವಿಯು ತಲೆಯಲ್ಲಿರುವ ಗುಣಚಕ್ರದಲ್ಲಿ ನಿವಾಸಿಸುತ್ತಿದ್ದಾನೆ. ಗುಣಚಕ್ರವೊಂದರ ಚಿತ್ರವನ್ನು ನೋಡಿರಿ.

ಗುಣಚಕ್ರ ನಾಲ್ಕು ಭಾಗಗಳಾಗಿ ಇದೆಯೆಂದು ತಿಳಿಯುತ್ತಿದೆ. ಆ ನಾಲ್ಕು ಭಾಗಗಳಲ್ಲಿಯೇ ಜೀವಿಯು ನಿವಾಸ ಏರ್ಪಡಿಸಿಕೊಳ್ಳುತ್ತಾನೆ. ಜೀವಿಯು ಯಾವ ಭಾಗದಲ್ಲಿ ನಿವಾಸಿಸುತ್ತಿದ್ದರೆ. ಆ ಭಾಗದ ಹೆಸರು ಜೀವಿಗೆ ಅನ್ವಯಿಸುತ್ತದೆ. ಮೊದಲ ಭಾಗವಾದ ತಾಮಸ ಗುಣಭಾಗದಲ್ಲಿ ಜೀವಿಯು ನಿವಾಸಿಸುತ್ತಿದ್ದರೆ, ಆ ಜೀವಿಯನ್ನು ತಾಮಸನು ಎಂದು ಹೇಳಬಹುದು. ತಾಮಸ ಗುಣಭಾಗ ಉಳಿದ ಎಲ್ಲಾ ಗುಣಭಾಗಗಳಿಗಿಂತ ವಿಸ್ತೀರ್ಣದಲ್ಲಿ ದೊಡ್ಡದಾಗಿರುತ್ತದೆ. ಎರಡನೆ ಭಾಗವಾದ ರಾಜಸ ಗುಣಭಾಗದಲ್ಲಿ ಜೀವಿಯು ನಿವಾಸಿಸುತ್ತಿದ್ದರೆ. ಆ ಜೀವಿಯನ್ನು ರಾಜಸನು ಎಂದು ಕರೆಯಬಹುದು. ರಾಜಸ ಭಾಗ ಮೊದಲನೆ ತಾಮಸ ಭಾಗಕ್ಕಿಂತ ವಿಸ್ತೀರ್ಣದಲ್ಲಿ ಸ್ವಲ್ಪ ಚಿಕ್ಕದಾಗಿದ್ದು ಸಾತ್ತ್ವಿಕ ಭಾಗಕ್ಕಿಂತ ಸ್ವಲ್ಪ ದೊಡ್ಡದಾಗಿರುತ್ತದೆ. ಇನ್ನು ಮೂರನೆಯದಾದ ಸಾತ್ತ್ವಿಕ ಗುಣಭಾಗದಲ್ಲಿ ಜೀವಿಯು ನಿವಾಸಿಸುತ್ತಿದ್ದರೆ ಅವನನ್ನು ಸಾತ್ತ್ವಿಕನೆಂದು ಕರೆಯುತ್ತೇವೆ. ಸಾತ್ತ್ವಿಕ ಗುಣಭಾಗ ವಿಸ್ತ್ರೀರ್ಣದಲ್ಲಿ ರಾಜಸ ಭಾಗಕ್ಕಿಂತ ಚಿಕ್ಕದಾಗಿರುತ್ತದೆ. ಇಲ್ಲಿಗೆ ಮೂರು ಗುಣಭಾಗಗಳು ಮುಗಿದುಹೋಗಿವೆ. ಇನ್ನು ಸಾತ್ತ್ವಿಕ ಭಾಗದ ನಂತರ ಇರುವ ನಾಲ್ಕನೆ ಭಾಗವನ್ನು ಯೋಗ ಭಾಗವೆಂದು ಕರೆಯುತ್ತಾರೆ. ಗುಣರಹಿತ ಭಾಗ.



ಈ ಭಾಗವು ಸಾತ್ತ್ವಿಕ ಗುಣಭಾಗಕ್ಕಿಂತ ವಿಸ್ತೀರ್ಣದಲ್ಲಿ ಬಹಳ ಚಿಕ್ಕದಾಗಿರುತ್ತದೆ. ಅದರ ವಿಸ್ತೀರ್ಣ ಸಾತ್ತ್ವಿಕಕ್ಕಿಂತ ಎಷ್ಟು ಕಡಿಮೆಯಾಗಿರುವುದು ಚಿತ್ರಪಟದಲ್ಲಿ ನೋಡುತ್ತಲೇ ತಿಳಿಯುತ್ತದೆ. ಗುಣಚಕ್ರದಲ್ಲಿ ನಾಲ್ಕನೆ ಭಾಗ ಕೊನೆಯದು ಮತ್ತು ಚಿಕ್ಕದು. ಯೋಗಭಾಗವು ಚಿಕ್ಕದೇ ಅಲ್ಲದೇ ಅದರಲ್ಲಿ ಗುಣಗಳು ಇಲ್ಲದೆ ದೈವಿಕವಾದ ಯೋಗ ಇರುವುದರಿಂದ ಅದನ್ನು ಉತ್ತಮವಾದ ಭಾಗವಾಗಿ ಕೂಡಾ ಲೆಕ್ಕಿಸುತ್ತಾರೆ. ಗುಣಚಕ್ರ ಅದರ ಭಾಗಗಳು ಯಾವುದು ಹೇಗಿರುವುದು ತಿಳಿದವನು "ಇರುವವರೆಲ್ಲರಿಗಿಂತಲೂ ಚಿಕ್ಕವನೇ ಮೇಲು" ಎಂದು ಹೇಳಿದ್ದಾನಂತೆ. ಆ ಮಾತಿನಲ್ಲಿನ ಆಂತರ್ಯ ಈಗ ನಮಗೆ ತಿಳಿದುಹೋಗಿದೆ ಅಲ್ಲವೇ!

**ಕಣ್ಣಿಗೆ ಕಾಣಿಸುವ ರೂಪವಾಗಿ, ಕಿವಿಗೆ ಕೇಳಿಸುವ ಶಬ್ದವಾಗಿ ಉಪದೇಶ ಇರುವುದಿಲ್ಲ. ಆದ್ದರಿಂದ ಉಪದೇಶವೆಂದು ಮಂತ್ರಗಳನ್ನು ಹೇಳುವವರು ಗುರುಗಳಲ್ಲ.**

## 39. ನೀನು ಕುಟ್ಟು, ನಾನು ಪಕ್ಕದಲ್ಲಿ ಎಗುರಾಕುತ್ತೇನೆ. ಎನ್ನುವುದು ಏನು?

ಬೆನ್ನಿನ ಮೇಲೆ ಒಂದುಕಡೆ ತುರಿಕೆ (ನವೆ) ಉಂಟಾದಾಗ ಇತರರಿಂದ ಬೆನ್ನಿನಮೇಲೆ ನವೆ ಇರುವಕಡೆ ಕೆರೆಸಿಕೊಳ್ಳುತ್ತೇವೆ. ಆಗ ಅಲ್ಲಿ ನವೆ ಅಡಗಿಹೋಗುತ್ತದೆ. ಮೊದಲಿರುವ ಕಡೆ ಕಡಿಮೆಯಾಗುತ್ತಿದಂತೆ ಅದರ ಪಕ್ಕದಲ್ಲಿಯೇ ನವೆ ಬರುತ್ತದೆ. ಮೊದಲಿಲ್ಲದ ಕಡೆ ನವೆ ಬರುವುದರಿಂದ ಅಲ್ಲಿ ಕೂಡಾ ಕೆರೆಸಿಕೊಂಡರು ಅಲ್ಲಿ ನವೆ ಕಡಿಮೆಯಾಗಿ ಅದರ ಪಕ್ಕದಲ್ಲಿಯೇ ಹೊಸ ನವೆ ಬರುತ್ತದೆ. ಹೀಗೆ ಬೆನ್ನೆಲ್ಲವೂ ಒಂದುಕಡೆ ಕೆರೆದರೆ ಮತ್ತೊಂದು ಕಡೆ ನವೆ ಬರುವುದು ನಡೆಯುತ್ತದೆ. ಕೊನೆಗೆ ಬೆನ್ನೆಲ್ಲವೂ ಕೆರೆಯಬೇಕಾಗಿ ಬರುತ್ತದೆ. ಹಾಗೆ ಏಕೆ ನಡೆಯುತ್ತಿದೆಯೆಂದರೇ!

ನಮ್ಮ ಶರೀರದಲ್ಲಿ ಪ್ರಾರಬ್ಧಕರ್ಮ ಎನ್ನುವುದು ಇರುವುದರಿಂದ ಆ ಕರ್ಮವನ್ನು ಅನುಸರಿಸಿ ನಮಗೆ ಕಷ್ಟಸುಖಗಳು ಒಂದರಹಿಂದೆ ಒಂದು

ಬರುತ್ತಿರುತ್ತವೆ. ಒಂದು ಸುಖವಾಗಲಿ ಅಥವಾ ದುಃಖವಾಗಲಿ ಕರ್ಮ ಪ್ರಕಾರ ಬಂದಿದೆಯೆಂದುಕೊಳ್ಳಿ. ಆಗ ಅದನ್ನು ಅನುಭವಿಸಿದ ನಂತರ ಮತ್ತೊಂದು ಸುಖವೊ ಅಥವಾ ದುಃಖವೊ ಕೂಡಲೇ ಬರುತ್ತಿರುತ್ತದೆ. ಸ್ವಲ್ಪ ಕರ್ಮ ಮುಗಿದುಹೋದ ನಂತರ ಸ್ವಲ್ಪಸಮಯ ಯಾವ ಕರ್ಮ ಅನುಭವಕ್ಕೆ ಬರುವುದಿಲ್ಲ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಭಗವದ್ಗೀತೆಯಲ್ಲಿ ಯಾರೇ ಆದರೂ ಕರ್ಮವನ್ನು ಅನುಭವಿಸದಂತೆ ಒಂದು ಕ್ಷಣ ಕೂಡಾ ಇರುವುದಕ್ಕೆ ಸಾಧ್ಯವಿಲ್ಲ ವೆಂದು ಹೇಳಲ್ಪಟ್ಟಿದೆ. ಒಂದು ಕರ್ಮ ಮುಗಿದುಹೋಗುತ್ತಲೇ ಮತ್ತೊಂದು ಕರ್ಮ ಬರುವುದು ಶಾಸ್ತ್ರಬದ್ಧವಾದ ಕೆಲಸವೆಂದು ಹೇಳಬಹುದು. ಕರ್ಮ ಅನುಭವಿಸಿದರೇನೆ ಮುಗಿದುಹೋಗುತ್ತದೆ. ಪ್ರತಿ ಮನುಷ್ಯ ಕರ್ಮವನ್ನು ಅನುಭವಿಸಿ ಮುಗಿಸಿಕೊಳ್ಳುತ್ತಿದ್ದಾನೆ. ಒಂದು ಕರ್ಮವನ್ನು ಅನುಭವಿಸಿಯಾದರೂ ಅಥವಾ ಜ್ಞಾನದಿಂದಾಗಲಿ ಮುಗಿಸಿಕೊಳ್ಳಬಹುದು. ಒಂದು ಕರ್ಮ ಹೇಗೆ ಮುಗಿದುಹೋದರೂ, ಅದರ ಪಕ್ಕದಲ್ಲಿಯೇ ಇರುವ ಕರ್ಮ ಪುನಃ ತಕ್ಷಣ ಜಾರಿಗೆ ಬರುತ್ತದೆ. ಇದೇ ವಿಧಾನ ನಮಗೆ ಪ್ರತ್ಯಕ್ಷವಾಗಿ, ಬೆನ್ನು ಕೆರೆಯುತ್ತಿರುವಾಗ ತಿಳಿಯಲ್ಪಡುತ್ತಿದೆ. ಒಂದುಕಡೆ ನವೆ ಹೋಗುತ್ತಲೇ, ಪಕ್ಕದಲ್ಲಿಯೇ ನವೆ ಹುಟ್ಟುವುದಕ್ಕೆ ಕಾರಣ, ಒಂದು ಕರ್ಮ ಮುಗಿದು ಹೋಗುತ್ತಲೇ ಪಕ್ಕದಲ್ಲಿಯೇ ಮತ್ತೊಂದು ಕರ್ಮ ಇರುತ್ತದೆಂದು ಮನುಷ್ಯ ತಿಳಿದುಕೊಳ್ಳುವುದಕ್ಕೇ ಹಾಗೆ ನಡೆಯುತ್ತಿದೆ.

ಕರ್ಮ ವಿಧಾನ ಹೀಗಿದೆಯೆಂದು ತಿಳಿಸುವ ಸಲುವಾಗಿಯೇ ನಮ್ಮ ಬೆನ್ನಿನ ಮೇಲೆ ನವೆ, ಕೆರೆದಂತೆಲ್ಲಾ ಬರುತ್ತದೆಂದು ತಿಳಿಯುತ್ತಿದೆ. ಕರ್ಮದಲ್ಲಿ ಸುಖ ಇರುತ್ತದೆ, ದುಃಖವು ಇರುತ್ತದೆ. ನವೆ ಕರ್ಮ ವಿಧಾನವನ್ನು ತಿಳಿಸುವುದು ಆದ್ದರಿಂದ ನವೆ ಸುಖವನ್ನುಕೊಡುವುದಾ ಅಥವಾ ದುಃಖವನ್ನು ಕೊಡುವುದಾ ಎಂದು ಪ್ರಶ್ನಿಸಿದರೇ, ನವೆಯನ್ನು ಕುರಿತು ಯಾವಕಡೆ ಹೇಳಲಾರೆವು. ನವೆ ಪುಣ್ಯಕ್ಕೆ ಗುರುತಾದ ಸುಖ ಕೊಡುವುದಾ? ಎಂದರೆ ಕೆರೆಯುವುದರಿಂದ ಸುಖ ಇದೆ, ಬಾಧೆ ಕೂಡಾ ಇದೆ. ಒಂದೊಂದು ಕಡೆ ಕೆರೆದರೇ ಸುಖವಾಗಿರುತ್ತದೆ. ನಂತರ ಬಾಧೆಯಾಗಿರುತ್ತದೆ. ಕೆಲವು ಕಡೆ ಕೆರೆಯುವಾಗಲೇ ಬಾಧೆಬರುತ್ತದೆ.

ಕೆಲವುಕಡೆ ಸುಖವಾಗಿಯೇ ಇರುತ್ತದೆ. ಹೀಗೆ ನವೆ ಎನ್ನುವುದು ಒಂದು ವಿಧವಾಗಿ ಅಲ್ಲದೇ. ಪಾಪಪುಣ್ಯಗಳಿಗೆ ಗುರುತಾಗಿ, ಸುಖದುಃಖಗಳಾಗಿ ಕಾಣಿಸುತ್ತಿದೆ. ಒಬ್ಬ ಜೀವಿಯು ಒಂದು ಸಮಯದಲ್ಲಿ ಒಂದು ಪುಣ್ಯವನ್ನು ಅನುಭವಿಸಿದ ಕೂಡಲೇ, ಅದರಹಿಂದೆಯೇ ಇರುವ ಪುಣ್ಯವನ್ನೋ, ಪಾಪವನ್ನೋ ಆತ್ಮ ಮೇಲೇರಿಸಿ ಒದಗಿಸುತ್ತದೆ. ಆತ್ಮ ಶರೀರದಲ್ಲಿನ ಸ್ಥೂಲ ಕಾರ್ಯಗಳನ್ನೂ ಮಾಡುವುದೇ ಅಲ್ಲದೇ, ಸೂಕ್ಷ್ಮವಾದ ಕಾರ್ಯಗಳನ್ನು ಅನೇಕವಾಗಿ ಮಾಡುತ್ತಿದೆ. ಅದರಲ್ಲಿ ಜೀವಿಯು ಕರ್ಮ ಅನುಭವಿಸುತ್ತಿರುವಾಗ, ಒಂದು ಕರ್ಮ ಮುಗಿದುಹೋಗುತ್ತಲೇ ಮತ್ತೊಂದು ಕರ್ಮ ಹಿಂದೆಹಿಂದಲೇ ಆತ್ಮ ಒದಗಿಸುತ್ತಿದೆ. ಜೀವಿಯಾಗಿರುವ ನೀನು ಕರ್ಮವನ್ನು ಕುಟ್ಟಿ ಇಲ್ಲದಂತೆ ಮಾಡುತ್ತಿರು, ನಾನು ಕರ್ಮವನ್ನು ತಂದಿರುಸುತ್ತೇನೆಂದು ಆತ್ಮ ಅನ್ನುತ್ತಿದೆ. ಈ ವಿಷಯವನ್ನು ತಿಳಿಸುವ ಸಲುವಾಗಿ ಈ ಒಗಟನ್ನು ಹೇಳಿದ್ದಾರೆಂದು ತಿಳಿಯುತ್ತಿದೆ.

**ಭೂಮಿಮೇಲೆ ಬೋಧಿಸುವವರೆಲ್ಲರು ಬೋಧಕರು ಮಾತ್ರವೇ, ಗುರುಗಳು ಅಲ್ಲ. ಭೂಮಿಮೇಲಕ್ಕೆ ಕೆಲವು ಸಾವಿರಾರು ವರ್ಷಗಳಿಗೊಮ್ಮೆ ಮಾತ್ರವೇ ಗುರುವು ಬರುತ್ತಾನೆ.**

## 40. ನಿನಗೆ ಎಲ್ಲಿ ಸಂಶಯವೋ, ನನಗೆ ಅಲ್ಲಿಯೇ ಸಂದೇಶ. ಈ ಮಾತನ್ನು ಯಾರು ಹೇಳಿದ್ದಾರೆ?

ಒಬ್ಬ ರೋಗಿ ಇದ್ದಾನೆಂದುಕೊಳ್ಳಿ. ಶರೀರದಲ್ಲಿ ಎಲ್ಲಿಯೋ ಒಂದುಕಡೆ ರೋಗವಿದ್ದು ಅವನು ಬಾಧೆಪಡುತ್ತಿರುವಾಗ, ಆ ರೋಗವನ್ನು ಗುಣ ಪಡಿಸುವುದಕ್ಕೆ ವೈದ್ಯನಿದ್ದಾನೆ. ವೈದ್ಯನೆಂದರೆ ಔಷಧಿಗಳನ್ನು ಕೊಡುವವನೆಂದು ಅರ್ಥವಲ್ಲ. ಆದರೆ ವೈದ್ಯನು ಎಂದರೇ ತಿಳಿದವನೆಂದು ಅರ್ಥ. ಏನನ್ನು ತಿಳಿದವನನ್ನಾದರೂ ವೈದ್ಯನೇ ಅನ್ನಬೇಕು. ಈಗ ರೋಗಿ ಶರೀರದಲ್ಲಿನ ರೋಗವನ್ನು ತಿಳಿದವನನ್ನು ವೈದ್ಯನು ಅನ್ನುತ್ತಿದ್ದೇವೆ. ರೋಗ ತಿಳಿದ ನಂತರ ಆ ರೋಗಕ್ಕೆ ಔಷಧಗಳು ತಿಳಿದಿರುವುದರಿಂದ ಆತನನ್ನು ವೈದ್ಯನು ಅನ್ನಬೇಕು. ಈ ವಿಧವಾಗಿ ತಿಳಿದವನನ್ನು ವೈದ್ಯನು ಅನ್ನಬಹುದು. ಹಾಗೇ ರೋಗವನ್ನು ತಿಳಿದವನನ್ನು ವೈದ್ಯನು ಎಂದು

ಕರೆಯಬಹುದು. ಹಾಗೆಯೇ ರೋಗಕ್ಕೆ ಔಷಧಗಳನ್ನು ತಿಳಿದವನನ್ನು ವೈದ್ಯನನ್ನ ಬಹುದು. ವೈದ್ಯನು ಎನ್ನುವಮಾತು ರೋಗಗಳಿಗೂ, ಔಷಧಗಳಿಗೂ ಸಂಬಂಧಿ ಸಿರುವುದೇ ಅಲ್ಲ. ಯಾವುದನ್ನು ತಿಳಿದವನನ್ನಾದರೂ ವೇದ್ಯನು ಎಂದು ಕರೆಯಬಹುದು. ಆದ್ದರಿಂದ ರೋಗಗಳ ವಿಷಯ ತಿಳಿಯದಿದ್ದರೂ, ಕೆಲವು ವಿಷಯಗಳಲ್ಲಿ ಮೇಧಾವಿಯಾದವನಿಗೆ, ಇವನು ವೈದ್ಯನು ಎಂದು ಎಲ್ಲರಿಗೂ ತಿಳಿಯುವಂತೆ, ಕೆಲವು ಯೂನಿವರ್ಸಿಟಿಗಳಲ್ಲಿ ಡಾಕ್ಟರ್ ಬಿರುದನ್ನು ಕೊಡುತ್ತಿದ್ದಾರೆ. ಡಾಕ್ಟರ್ ಎಂದರೇ ಔಷಧಿಗಳು, ರೋಗಗಳು ತಿಳಿದವನೆಂದು ಅಂದುಕೊಳ್ಳ ಬಾರದು. ಮೇಧಾವಿಯನ್ನು ಡಾಕ್ಟರ್ ಎನ್ನಬಹುದು. ವೈದ್ಯೋ ನಾರಾಯ ಣೋಹರಿ ಎಂದು ಹೇಳಿದ್ದಾರೆ. ವೈದ್ಯನು ಎಂದರೇ ದೇವರಿಗೆ ಸಮಾನವೆಂದು ಆ ಮಾತಿಗೆ ಅರ್ಥ. ದೇವರು ಎಲ್ಲಾ ವಿಷಯಗಳು ತಿಳಿದವನು ಆದ್ದರಿಂದ ಆತನು ಎಲ್ಲರಿಗಿಂತ ದೊಡ್ಡ ವೈದ್ಯನು.

ರೋಗಕ್ಕೆ ಔಷಧಿಕೊಡುವವನು, ಎಲ್ಲರಿಗೂ ಚೆನ್ನಾಗಿ ತಿಳಿದ ವೈದ್ಯನು. ಯಾವ ಶಾಸ್ತ್ರವನ್ನು ಸಂಪೂರ್ಣವಾಗಿ ತಿಳಿದವನನ್ನಾದರೂ ವೈದ್ಯನೆಂದು ಹೇಳಿದರೂ, ಒಂದು ರೋಗ ವಿಷಯವನ್ನು ತಿಳಿದವನನ್ನೇ ವೈದ್ಯನು ಎಂದು ಅನ್ನುವುದಕ್ಕೆ ಅಭ್ಯಾಸವಾಗಿದೆ. ಹಾಗೆ ಏಕೆ ನಮ್ಮ ಹಿರಿಯರು ಅಭ್ಯಾಸ ಮಾಡಿದ್ದಾರೆಂದರೇ! ಒಬ್ಬ ಮನುಷ್ಯನಲ್ಲಿರುವ ರೋಗವನ್ನು ಹೋಗಲಾಡಿಸುವು ದಕ್ಕೆ, ಅದಕ್ಕೆ ತಕ್ಕ ಔಷಧಿಕೊಡುವವನು ವೈದ್ಯನು ಎಂದು ತಿಳಿಯುವುದರಿಂದ, ಒಬ್ಬ ಮನುಷ್ಯನಲ್ಲಿರುವ ಕರ್ಮವನ್ನು ಹೋಗಲಾಡಿಸುವುದಕ್ಕೆ ಅದಕ್ಕೆ ತಕ್ಕ ಜ್ಞಾನವನ್ನು ಕೊಡುವವನು ದೇವರು (ಗುರು) ಎಂದು ಸುಲಭವಾಗಿ ತಿಳಿಯಬಹು ದೆಂದು, ಆ ವಿಧವಾಗಿ ರೋಗಗಳಿಗೆ ಸಂಬಂಧಿಸಿದವನನ್ನೇ ವೈದ್ಯನೆಂದು ಪ್ರಚಾರ ಮಾಡಿದ್ದಾರೆ. ಯಾವುದು ಏನಾದರೂ ಈಗ ನಮಗೆ ಹೊಸದಾಗಿ ತಿಳಿದ ವಿಷಯವೇನೆಂದರೇ! ಯಾವ ರಂಗದಲ್ಲಿ ತಿಳಿದವನನ್ನಾದರೂ ಡಾಕ್ಟರ್ ಎಂದು ಅಥವಾ ವೈದ್ಯನೆಂದು ಕರೆಯಬಹುದು. ಗುರು ಎಂದರೂ ದೇವರು ಎಂದರೂ ಇಬ್ಬರೂ ಒಂದೇಯೆಂದು ಬ್ರಹ್ಮವಿದ್ಯಾಶಾಸ್ತ್ರ ತಿಳಿಯಪಡಿಸುತ್ತಿದೆ. ಸರ್ವಜ್ಞಾನವನ್ನು ತಿಳಿದವನನ್ನು ಗುರು ಎನ್ನಬಹುದು. ಅಂತಹ ಗುರು ಸಂಪೂರ್ಣಜ್ಞಾನಿ ಆಗಿರುವುದರಿಂದ ನಿನಗೆ ಎಲ್ಲಿ ಸಂಶಯವೋ ನನಗೆ ಅಲ್ಲಿಯೇ

ಸಂದೇಶವೆಂದು ಹೇಳಿದ್ದಾನಂತೆ, ಯಾವ ಮನುಷ್ಯನಿಗಾದರೂ ಯಾವ ಸಂಶಯವಿದ್ದರೂ ಅದಕ್ಕೆ ಅಲ್ಲಿಯೇ ಉತ್ತರವಾಗಿರುವವನು ಗುರು (ವೈದ್ಯನು). ದೈವಸಂಬಂಧ ವಿಷಯಗಳನ್ನು ಸಂಪೂರ್ಣವಾಗಿ ತಿಳಿದವನು ಒಬ್ಬ ಗುರುವೇ. ಆದ್ದರಿಂದ ಎಲ್ಲಿ ಸಂಶಯವಿರುತ್ತದೋ ಅಲ್ಲಿ ಆತನ ಸಂದೇಶದಿಂದಲೇ ಅದು ನುಚ್ಚು ನೂರಾಗಿ ಹೋಗುತ್ತದೆ. ಆದ್ದರಿಂದ ಒಗಟಿನಲ್ಲಿ ನಿನ್ನ ಸಂಶಯ ಎಲ್ಲಿಯೋ ನನ್ನ ಸಂದೇಶ ಅಲ್ಲಿಯೇ ಎನ್ನುವಂತೆ ತಿಳಿಸಿದ್ದಾರೆ. ದೇಶದಲ್ಲಿ ಎಷ್ಟೋ ರಂಗಗಳಲ್ಲಿ ಎಷ್ಟೋಜನ ವೈದ್ಯರಿದ್ದಾರೆ. ನಮಗೆ ಬೇಕಾದ ವೈದ್ಯನು ಆಧ್ಯಾತ್ಮಿಕ ರಂಗದಲ್ಲಿನವ ನೆಂದು ಮರೆಯಬಾರದು.

**ಜೀವಿಯು ಕರ್ಮವನ್ನು ಅನುಭವಿಸುವುದರಿಂದ ಕರ್ಮ ಮುಗಿದುಹೋಗುತ್ತಿದೆ. ಆದರೆ ಜೀವಿಗೆ ಅಹಂಕಾರವು ಮತ್ತಷ್ಟು ಕರ್ಮವನ್ನು ಸಂಪಾದಿಸಿ ಇಡುತ್ತಿದೆ.**

## 41. ಯೋಗಿಗೆ, ರೋಗಿಗೆ, ಭೋಗಿಗೆ ನಿದ್ರೆಯಿಲ್ಲ. ಯೋಗಿ, ರೋಗಿ, ಭೋಗಿ ಯಾರು?

ಯೋಗಿಯಾಗಲಿ, ರೋಗಿಯಾಗಲಿ, ಭೋಗಿಯಾಗಲಿ, ಯಾರೇ ಆದರೂ ಅವನು ಜೀವಿಯೇ ಆಗಿರುತ್ತಾನೆ. ಒಬ್ಬ ಮನುಷ್ಯ ಯಾವ ವೇಶವನ್ನಾದರೂ ಹಾಕಬಹುದು. ರಾಮನ ವೇಷವನ್ನು ಹಾಕಿದಾಗ ಆತನನ್ನು ರಾಮನನ್ನಾಗಿ ಲೆಕ್ಕಿಸುತ್ತೇವೆ. ಅದೇ ಮನುಷ್ಯ ಹನುಮಂತನಾಗಿ ವೇಷವನ್ನು ಧರಿಸಿದವನನ್ನು ಆಂಜನೇಯನು ಎಂದು ಕರೆಯುತ್ತಾರೆ. ಹೀಗೆ ಯಾವ ವೇಷದಲ್ಲಿ ಇದ್ದರೂ ಅವನನ್ನು ಆ ಹೆಸರಿನಿಂದ ಕರೆದಂತೆ, ಒಬ್ಬ ಮನುಷ್ಯನ ಶರೀರದಲ್ಲಿ ಜೀವಿಯು, ಗುಣಭಾಗಗಳಲ್ಲಿದ್ದು ಬಾಧೆಗಳನ್ನು ಅನುಭವಿಸುವಾಗ ಅವನನ್ನು ರೋಗಿ ಅನ್ನುತ್ತಿದ್ದೇವೆ. ಹಾಗೆಯೇ ಗುಣಭಾಗಗಳಲ್ಲಿಯೇ ಇದ್ದು ಸುಖಗಳನ್ನು ಅನುಭವಿಸುತ್ತಿರುವಾಗ ಅವನನ್ನು ಭೋಗಿ ಅನ್ನುತ್ತಿದ್ದೇವೆ. ಅದೇ ಜೀವಿಯೇ ಗುಣಭಾಗಗಳನ್ನು ಬಿಟ್ಟು, ಗುಣವಿಲ್ಲದ ಭಾಗವಾದ ಯೋಗಭಾಗದಲ್ಲಿರುವಾಗ ಅವನನ್ನು ಯೋಗಿ ಅನ್ನುತ್ತಿದ್ದೇವೆ. ಗುಣಚಕ್ರದಲ್ಲಿ ಜೀವಿಯು, ಗುಣಭಾಗದಲ್ಲಿರು

ವಾಗ ರೋಗಿಯಾಗಿಯೋ ಇಲ್ಲವೆ ಭೋಗಿಯಾಗಿಯೋ ಇರುತ್ತಾನೆ. ಗುಣಗಳಿಲ್ಲದ ಭಾಗವಾದ ನಾಲ್ಕನೇ ಭಾಗದಲ್ಲಿ ಜೀವಿಯು ಇರುವಾಗ ಆತನು ಯೋಗಿಯಾಗಿರುತ್ತಾನೆ. ಒಬ್ಬ ಜೀವಿಯು ಯೋಗಿಯಾಗಿ, ರೋಗಿಯಾಗಿ, ಭೋಗಿಯಾಗಿ ಇದ್ದರೂ, ಜೀವಿಯು ಎಚ್ಚರದಲ್ಲಿಯೇ ಯೋಗಿಯಾಗಿ ಇರುತ್ತಾನೆಂದು ಇಲ್ಲವೆ ಭೋಗಿಯಾಗಿ ಆಗಲಿ, ರೋಗಿಯಾಗಿ ಆಗಲಿ ಎಚ್ಚರದಲ್ಲಿಯೇ ಇರುತ್ತಾನೆಂದು, ನಿದ್ರೆಯಲ್ಲಿ ಇರುವುದಿಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ನಿದ್ರೆ ಮನಸ್ಸಿಗೇ ಹೊರತು, ಜೀವಿಗೆ ಇರುವುದಿಲ್ಲ. ನಿದ್ರೆ ಬಾರದಮುನ್ನ ಎಚ್ಚರದಲ್ಲಿ ಜೀವಿಯು ರೋಗಿಯಾಗಿ ಇದ್ದಾನೆಂದುಕೊಳ್ಳೋಣ. ನಿದ್ರೆಹೋಗಿ ಪುನಃ ಎಚ್ಚರಬಂದಾಗ ಆತನು ರೋಗಿಯಾಗಿಯೇ ಲೆಕ್ಕಿಸಲ್ಪಡುತ್ತಾನೆ. ಹಾಗೆಯೇ ಎಚ್ಚರದಲ್ಲಿ ಜೀವಿಯು ಭೋಗಿಯಾಗಿದ್ದಾಗ ನಿದ್ರೆ ಹೋಗಿದ್ದಾನೆಂದುಕೊಳ್ಳೋಣ. ನಂತರ ಅವನು ಪುನಃ ಎದ್ದಾಗಲೂ ಸಹಾ ಆತನು ಭೋಗಿಯಾಗಿಯೇ ಲೆಕ್ಕಿಸಲ್ಪಡುತ್ತಾನೆ. ಯೋಗಿಯಾದವನು ಕೂಡಾ ನಿದ್ರೆಹೋಗಿ, ಪುನಃ ನಿದ್ರೆಯಿಂದ ಎದ್ದ ನಂತರ ಅವನು ಯೋಗಿಯಾಗಿಯೇ ಲೆಕ್ಕಿಸಲ್ಪಡುತ್ತಾನೆ. ಯಾವ ಗುಣದಲ್ಲಿ ನಿದ್ರೆ ಹೋದವನು ಪುನಃ ಎದ್ದಾಗ  ಆ ಗುಣದಲ್ಲಿನವನೆಂದೇ ಲೆಕ್ಕಿಸಲ್ಪಡುತ್ತದೆ. ನಿದ್ರೆ ಮನಸ್ಸಿಗಿರುವುದರಿಂದ ಜೀವಿಗೆ ನಿದ್ರೆ ಇಲ್ಲದಿರುವುದರಿಂದ ಜೀವಿಯು ನಿದ್ರೆ ಹೋಗುವುದಕ್ಕಿಂತ ಮುನ್ನ ಯಾವ ಭಾವನೆಯಲ್ಲಿರುತ್ತಾನೋ ಪುನಃ ಎದ್ದಾಗ ಅದೇ ಭಾವನೆಯಲ್ಲಿ ಇರುತ್ತಾನೆಂದು ತಿಳಿಯಬೇಕು. ಆದ್ದರಿಂದ ಈ ಒಗಟಿನಲ್ಲಿ ಯೋಗಿಗೆ,  ರೋಗಿಗೆ, ಭೋಗಿಗೆ ನಿದ್ರೆಯಿಲ್ಲವೆಂದು ಹೇಳಿದ್ದಾರೆ. ಬಹಳಜನರಿಗೆ ಜೀವಿಯು ನಿದ್ರೆಹೋಗುವುದಿಲ್ಲ ಎನ್ನುವ ವಿಷಯ ತಿಳಿದಿಲ್ಲ. ಶರೀರದಲ್ಲಿ ನಿದ್ರೆಹೋಗುವುದು ಮನಸ್ಸು ಒಂದೇಯೆಂದು, ಜೀವಿಯಾಗಲಿ, ಯಾವ ಇತರ  ಅವಯವಗಳಾಗಲಿ ನಿದ್ರೆಹೋಗುವುದಿಲ್ಲವೆಂದು ತಿಳಿದಿಲ್ಲ. ಆದ್ದರಿಂದ ಪ್ರತ್ಯೇಕಿಸಿ ಜೀವಿಗೆ ನಿದ್ರೆಯಿಲ್ಲ ಎನ್ನುವ ವಿಷಯವನ್ನು ತಿಳಿಸುವುದಕ್ಕೆ ಈ ಒಗಟನ್ನು ಹೇಳಿದ್ದಾರೆ.

**ಹುಟ್ಟಿದ ನಂತರ ಪ್ರತಿ ಮನುಷ್ಯ ಇದು ನನ್ನ ಮತವೆಂದು ಹೇಳಬಲ್ಲನು.**
**ಹುಟ್ಟಿದ ನಂತರ ಯಾವ ಮನುಷ್ಯ ಇದು ನನ್ನ ಜ್ಞಾನವೆಂದು ಹೇಳಲಾರನು.**

## 42. ಏಳುಬೆಟ್ಟಗಳ ಆಚೆ ಕೆಂಪೆತ್ತು ಅರಚುತ್ತಿದೆ. ಕೆಂಪೆತ್ತು ಯಾವುದು?

ತಿರುಪತಿ ವೆಂಕಟೇಶ್ವರನು ಏಳು ಬೆಟ್ಟಗಳ ಮೇಲೆ ಇದ್ದಾನೆಂದು ಹೇಳುತ್ತಿರುತ್ತಾರೆ. ಆದರೇ ಅಲ್ಲಿ ಏಳುಬೆಟ್ಟಗಳೇ ಎಂದು ಖಚಿತವಾಗಿ ಹೇಳಲಾರೆವು. ವೆಂಕಟೇಶ್ವರನಿರುವುದು 49 ಬೆಟ್ಟಗಳಮೇಲೆಯೋ ಇಲ್ಲವೇ ಇನ್ನೂ ಹೆಚ್ಚು ಬೆಟ್ಟಗಳ ಮೇಲೆಯೋ ಹೇಳಲಾರೆವು. ಆದರೇ ಆಧ್ಯಾತ್ಮಿಕ ಜ್ಞಾನವನ್ನು ದೈವತ್ವ ವಿಧಾನವನ್ನು ಹೇಳಬೇಕಾದ ಕಡೆಯೆಲ್ಲಾ ಏಳು ಪದವನ್ನು ಬಳಸುತ್ತಾರೆ. ಏಳಕ್ಕು ಬ್ರಹ್ಮವಿದ್ಯೆಗೂ ಆ ವಿಧವಾಗಿ ಅವಿನಾಭಾವ ಸಂಬಂಧ ಏರ್ಪಟ್ಟಿದೆ. "ಮಹರ್ಷಯ ಸಪ್ತಪೂರ್ವೆ ಎನ್ನುವ ವಾಕ್ಯ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಾಗಲೇ ಸಪ್ತ ಎನ್ನುವ ಸಂಖ್ಯೆಗೆ ಆಧ್ಯಾತ್ಮಿಕದಲ್ಲಿ ಸೃಷ್ಟ್ಯಾದಿಯಲ್ಲಿಯೇ ಸ್ಥಾನ ಏರ್ಪಟ್ಟಿದೆಯೆಂದು ಹೇಳಬಹುದು. ಸೃಷ್ಟಿ ಮೊದಲಿನಲ್ಲಿಯೇ ಮಾನವ ಶರೀರವನ್ನು ಸೃಷ್ಟಿಸಿದಾಗ, ಅದನ್ನು ಕೆಲವು ನಿಯಮಗಳಿಂದ ಸೃಷ್ಟಿಸಿದ್ದಾರೆ. ಆ ನಿಯಮಗಳ ಪ್ರಕಾರ ಶರೀರದಲ್ಲಿ ಏಳು ನಾಡೀಕೇಂದ್ರಗಳು, ಏಳು ಗ್ರಂಥಿಗಳನ್ನಿಟ್ಟು ತಯಾರು ಮಾಡಿದ್ದಾರೆ. ಶರೀರದಲ್ಲಿ ಆತ್ಮಶಕ್ತಿ ಅಥವಾ ದೈವಶಕ್ತಿ ಏಳು ನಾಡೀಕೇಂದ್ರಗಳಲ್ಲಿ ಇರುವಂತೆ, ಏಳು ಗ್ರಂಥಿಗಳಲ್ಲಿ ಇರುವಂತೆ ಏರ್ಪಡಿಸಿ ನಿರ್ಮಿಸಿದ್ದಾರೆ. ನಮ್ಮ ಶರೀರದಲ್ಲಿನ ಏಳು ನಾಡೀಕೇಂದ್ರಗಳಿಗು ಗುರುತಾಗಿ ತಿರುಪತಿ ದೇವಸ್ಥಾನದಲ್ಲಿ ಏಳು ದ್ವಾರಗಳನ್ನು ನಿರ್ಮಿಸಿದ್ದಾರೆ. ಹಾಗೆಯೇ ಏಳು ಗ್ರಂಥಿಗಳಿಗೆ ಗುರುತಾಗಿ ಗೋಪುರಕ್ಕೆ ಏಳು ದ್ವಾರಗಳನ್ನು ನಿರ್ಮಿಸಿದ್ದಾರೆ. ಈ ವಿಧವಾಗಿ ಶರೀರದಲ್ಲಿನ ಗ್ರಂಥಿಗಳನ್ನು, ನಾಡಿಕೇಂದ್ರಗಳನ್ನು ದೇವಾಲಯಗಳ ಹತ್ತಿರ ತೋರಿಸುವುದು ನಡೆದಿದೆ. ಮಾನವ ಶರೀರವನ್ನು ದೇಹವೇ ದೇವಾಲಯವೆಂದು ವರ್ಣಿಸುತ್ತಾ ಅದರಲ್ಲಿ ದ್ವಾರಗಳೇ ನಾಡೀ ಕೇಂದ್ರಗಳೆಂದು, ಗೋಪುರದ ಮೇಲೆ ದ್ವಾರಗಳು ಗ್ರಂಥಿಗಳೆಂದು ಹೇಳುವುದು ನಡೆದಿದೆ. ಪ್ರಸ್ತುತ ಕಾಲದಲ್ಲಿ ಶರೀರಕ್ಕು ದೇವಾಲಯಕ್ಕು ಹೋಲಿಕೆ ಇರುವಂತೆ ಯಾರಿಗೂ ತಿಳಿಯದಂತೆ ಹೋಗಿದೆ. ಈಗ ನಿರ್ಮಿಸುವ ಗುಡಿಗಳಲ್ಲಿ ಆಧ್ಯಾತ್ಮಿಕ ಸೂಚನೆಗಳು ಎಲ್ಲಿಯೂ ಕಾಣಿಸುತ್ತಿಲ್ಲ.

ನಮ್ಮ ಶರೀರದಲ್ಲಿಯೇ ದೈವಜ್ಞಾನವೆಲ್ಲಾ ಒಳಗೊಂಡಿರುವಂತೆ ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿದೆ. ಶರೀರವನ್ನು ಬಿಟ್ಟು ಒಂದು ಶ್ಲೋಕವನ್ನು ಕೂಡಾ ಹೇಳಲಿಲ್ಲವೆಂದು ನಾವು ಬರೆದ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಬರೆದಿದ್ದೇವೆ. ಭಗವದ್ಗೀತೆ ಜ್ಞಾನದ ಪ್ರಕಾರ ನಮ್ಮ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿ ಆತ್ಮಶಕ್ತಿ ವ್ಯಾಪಿಸಿದೆ. ಆತ್ಮಶಕ್ತಿಗೆ ಕೇಂದ್ರ ಏಳನೆ ನಾಡಿಕೇಂದ್ರವಾದ ಮೆದುಳು ಮತ್ತು ಅದರಲ್ಲಿನ ಗ್ರಂಥಿ ರಾಜ (ಪಿಟ್ಯೂಟರಿ ಗ್ಲಾಂಡ್) ಎಂದು ಹೇಳಬಹುದು. ಮೇಲೆ ತಲೆಯೊಳಗಿನಿಂದ ಬ್ರಹ್ಮನಾಡಿ ಮೂಲಕ ಬಂದು, ಶರೀರವೆಲ್ಲಾ ಹರಡುವ ಆತ್ಮಶಕ್ತಿ ಬ್ರಹ್ಮನಾಡಿಯಲ್ಲಿ ಕೆಳಗೆ ಆರು ಕೇಂದ್ರಗಳನ್ನು ಇಟ್ಟುಕೊಂಡಿದೆ. ಮೇಲೆ ತಲೆಯಲ್ಲಿರುವ ಕೇಂದ್ರದೊಂದಿಗೆ ಲೆಕ್ಕಿಸಿಕೊಂಡರೆ ಒಟ್ಟು ಏಳು ನಾಡಿಕೇಂದ್ರ ಗಳಾಗುತ್ತಿವೆ. ದೈವಶಕ್ತಿ ಅಥವಾ ಆತ್ಮಶಕ್ತಿ ಈ ಏಳು ನಾಡಿಕೇಂದ್ರಗಳಲ್ಲಿ ಒಂದೊಂದು ಕಡೆ ಸ್ವಲ್ಪ ಬಿಡುಗಡೆಯಾಗಿ ಶರೀರವೆಲ್ಲಾ ಹರಡುತ್ತಿದೆ. ಈ ಏಳು ನಾಡಿಕೇಂದ್ರಗಳನ್ನು ಏಳು ಬೆಟ್ಟಗಳಾಗಿ ಹೇಳಿಕೊಂಡಿದ್ದೇವೆ. ಏಳು ನಾಡಿಕೇಂದ್ರಗಳನ್ನು ದಾಟಿದ ನಂತರ ಆತ್ಮಯಿದೆ. ಆದ್ದರಿಂದ ಇದೇ ವಿಷಯವನ್ನು ತಿಳಿಸುವುದಕ್ಕೆ ಗುಡಿಯಲ್ಲಿ ಕೂಡಾ ಏಳು ದ್ವಾರಗಳನ್ನು ದಾಟಿದ ನಂತರ ದೇವರನ್ನು ಇಟ್ಟಿದ್ದಾರೆ. ಏಳು ಕೇಂದ್ರಗಳಿಂದ ಶಕ್ತಿ ಬರುತ್ತಿದೆ. ಆದರೆ ಶಕ್ತಿ ಕೇಂದ್ರ ಏಳು ದಾಟಿದ ನಂತರವಿದೆ. ಆತ್ಮಶಕ್ತಿಯನ್ನು ಕೆಂಪೆತ್ತಿಗೆ ಹೋಲಿಸಿ ನಾಡಿಕೇಂದ್ರಗಳನ್ನು ಬೆಟ್ಟಗಳಿಗೆ ಹೋಲಿಸಿ "ಏಳು ಬೆಟ್ಟಗಳ ಆಚೆ ಕೆಂಪೆತ್ತು ಅರಚುತ್ತಿದೆ" ಎಂದು ಈ ಒಗಟಿನಲ್ಲಿ ಹೇಳಿದ್ದಾರೆ. ಈ ಒಗಟನ್ನು ಬಿಚ್ಚಿಕೊಂಡರೆ ಆತ್ಮಶಕ್ತಿ ನಮ್ಮ ಶರೀರದಲ್ಲಿ ಹೇಗೆ ಪ್ರವಹಿಸುತ್ತಿದೆಯೋ ತಿಳಿಯುತ್ತದೆ.

**ಮತವನ್ನು ಬೋಧಿಸುವ ಮತ ಗುರುಗಳು ಎಷ್ಟೋಜನ ಇದ್ದಾರೆ.**
**ಜ್ಞಾನವನ್ನು ಬೋಧಿಸುವ ಜ್ಞಾನಗುರು ಒಬ್ಬನೇ ಇರುತ್ತಾನೆ.**

## 43. ಬಾಯಿ ಒಳ್ಳೆಯದಾದರೆ, ಊರು ಒಳ್ಳೆಯದಾಗುತ್ತದೆ. ಊರು ಯಾವುದು? ಬಾಯಿ ಯಾವುದು?

ಪ್ರಪಂಚದಲ್ಲಿ ಎಲ್ಲರಿಗೂ ತಿಳಿದಿರುವುದು ಮುಖದಲ್ಲಿರುವ ಬಾಯಿ. ಎರಡು ತುಟಿಗಳ ಮಧ್ಯದಲ್ಲಿರುವುದೇ ಬಾಯಿಯೆಂದು ಯಾರಾದರೂ

ಹೇಳಬಲ್ಲರು. ಹಾಗೇ ಮನುಷ್ಯರು ನಿವಾಸಿಸುವ ಗ್ರಾಮವನ್ನು ಊರು ಎಂದು ಎಲ್ಲರೂ ಅನ್ನುತ್ತಿದ್ದಾರೆ. ನಾವಂದುಕೊಂಡು 'ಬಾಯಲ್ಲದಬಾಯಿ' ಏನಾದರೂ ಇದೆಯಾ ಎಂದರೇ, ಅಂಥಾದ್ದು ಎಲ್ಲಿದೆಯೋ ತಿಳಿದಿಲ್ಲವೆಂದು ಬಹಳಜನ ಸಮಾಧಾನ ಹೇಳುತ್ತಾರೆ. ಹಾಗೆಯೇ ನಮಗೆ ತಿಳಿದ ಊರಲ್ಲದೆ ಬೇರೆ ವಿಧವಾಗಿರುವ ಊರು ಯಾವುದಾದರೂ ಇದೆಯಾ ಎಂದು ಕೇಳಿದರೆ 'ಊರಲ್ಲದ ಊರು' ೦ ಯಾವುದು ನಮಗೆ ತಿಳಿದಿಲ್ಲ ಎಂದು ಬಹಳಜನ ಹೇಳುತ್ತಾರೆ. ಆದರೇ ಈಗ ನಾವು ಬಾಯಲ್ಲದ ಬಾಯನ್ನು, ಊರಲ್ಲದ ಊರನ್ನು ತಿಳಿದುಕೊಳ್ಳಬೇಕೆಂದು ಕೊಂಡಿದ್ದೇವೆ. ಏಕೆಂದರೇ ಈ ಒಗಟಿನಲ್ಲಿ ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದಾಗುತ್ತದೆಂದು ಬಾಯಿಗು, ಊರಿಗು ಸಂಬಂಧ ಇಟ್ಟಿದ್ದಾರೆ. ಆದ್ದರಿಂದ ಒಳ್ಳೆಯ ಬಾಯಿ ಎಂಥಾದ್ದೋ ಒಳ್ಳೆಯ ಊರು ಎಂಥಾದ್ದೋ ಗಮನಿಸೋಣ.

ನಾವು ನಿವಾಸಿಸುವ ಊರುಗಳಲ್ಲಿ (ಗ್ರಾಮಗಳಲ್ಲಿ) ಎಷ್ಟೋಜನ ಒಳ್ಳೆಯವರಿದ್ದಾರೆ. ಅವರು ಯಾರೊಂದಿಗೂ ಕಠಿಣವಾಗಿ ಮಾತನಾಡದೆ ಇತರರೊಂದಿಗೆ ಎಷ್ಟೋ ಸೌಮ್ಯವಾಗಿ ಮಾತನಾಡುತ್ತಾ, ಎಲ್ಲರಿಗೂ ಒಳ್ಳೆಯದಾಗಿ ಇರಬೇಕೆಂದು ಪ್ರಯತ್ನಿಸುತ್ತಿರುತ್ತಾರೆ. ಆದರೇ ಅವರು ಎಲ್ಲರಿಗೂ ಒಳ್ಳೆಯವರಾಗಿ ಕಾಣಿಸುತ್ತಿದ್ದಾರಾ ಎಂದು ನೋಡಿದರೆ, ಅವರು ಬಹಳಜನರಿಗೆ ಒಳ್ಳೆಯದಾಗಿ ಕಾಣಿಸಿದರೂ, ಸ್ವಲ್ಪಜನರಿಗೆ ಕೆಟ್ಟವರಾಗಿಯೇ ಕಾಣಿಸುತ್ತಿದ್ದಾರೆ. ಮನುಷ್ಯ ತನ್ನ ಸ್ವಭಾವವನ್ನು ಅನುಸರಿಸಿ ಇನ್ನೊಬ್ಬನನ್ನು ಲೆಕ್ಕಿಸಿಕೊಳ್ಳುತ್ತಿರುತ್ತಾನೆ. ಒಬ್ಬ ವ್ಯಕ್ತಿ ಇತರರೊಂದಿಗೆ ಕಿತ್ತಾಡುವ ಸ್ವಭಾವ ಇರುವವನಾದಾಗ ಬಾಯಿ ಒಳ್ಳೆಯದಾದರೂ ಅವನನ್ನು ಕೂಡಾ ಕೆಟ್ಟವನಾಗಿ ಲೆಕ್ಕಿಸಿ ಯಾವುದೊ ಒಂದು ವಿಧವಾಗಿ ಅವನೊಂದಿಗೆ ವಾದಕ್ಕೆಳೆಯುತ್ತಾನೆ. ಯಾರ ಸ್ವಭಾವದ ಪ್ರಕಾರ ಅವರು ಪ್ರವರ್ತಿಸುತ್ತಾರೆ ಆದರೆ, ಒಬ್ಬ ವ್ಯಕ್ತಿಯನ್ನು ಅನುಸರಿಸಿ ಪ್ರವರ್ತಿಸುವುದಿಲ್ಲವೆಂದು ತಿಳಿಯುತ್ತಿದೆ. ನನಗೆ ತಿಳಿದಮಟ್ಟಿಗೆ ಒಬ್ಬ ವ್ಯಕ್ತಿಗೆ ಎಲ್ಲರೂ ಕೆಟ್ಟವರಾಗಿಯೇ ಕಾಣಿಸುತ್ತಿರುತ್ತಾರೆ. ತಾನು ಮಾತ್ರ ಸರಿಯಾದ ವ್ಯಕ್ತಿಯೆಂದು ಅಂದುಕೊಳ್ಳುತ್ತಾ ಇರುತ್ತಾನೆ. ಅಂತಹವನನ್ನು ಹತ್ತುಜನ ಒಳ್ಳೆಯವರಲ್ಲಿ ಬಿಟ್ಟರು,

ಅವನ ದೃಷ್ಠಿಯಲ್ಲಿ ಹತ್ತುಜನ ಕೆಟ್ಟವರಾಗಿಯೇ ಕಾಣಿಸುತ್ತಿರುತ್ತಾರೆ. ಆದ್ದರಿಂದ ಬಾಯಿ ಒಳ್ಳೆಯದಾದಷ್ಟು ಮಾತ್ರಕ್ಕೆ ಎಲ್ಲರಿಗೂ ಒಳ್ಳೆಯದಾಗಿ ಕಾಣಿಸುತ್ತಾರೆನ್ನುವ ನಂಬಿಕೆಯಿಲ್ಲ. ಆದರೇ ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದಾಗುತ್ತದೆನ್ನುವ ಮಾತು ಪೂರ್ತಿ ಸತ್ಯ ಅಲ್ಲವೆಂದು, ಆ ವಿಧವಾಗಿ ಹೊರಗಿನ ಪ್ರಪಂಚದಲ್ಲಿ ಇಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ನಮ್ಮ ಹಿರಿಯರು ಆ ಒಗಟನ್ನು ಏಕೆ ಬಳಸಿದ್ದಾರೆ ಎನ್ನುವ ಪ್ರಶ್ನೆ ಬರುತ್ತದೆ. ಅದಕ್ಕೆ ಸಮಾಧಾನ ಏನೆಂದರೇ!

ಇದು ಪ್ರಪಂಚ ಸಂಬಂಧವಾಗಿ ಹೇಳಿದ ವಾಕ್ಯವಲ್ಲ. ದೈವಜ್ಞಾನಕ್ಕೆ ಸಂಬಂಧಿಸಿದ ವಾಕ್ಯವಾಗಿ ಗುರುತಿಸಬೇಕು. ದೈವಜ್ಞಾನದ ಪ್ರಕಾರ ಈ ವಾಕ್ಯ ಪೂರ್ತಿ ಸತ್ಯವಾದುದೆಂದು ತಿಳಿಯುತ್ತಿದೆ. ಈ ವಾಕ್ಯವನ್ನು ಪ್ರಪಂಚ ಕೋನದಿಂದ ನೋಡದೆ ಪರಮಾತ್ಮ ಜ್ಞಾನದ ಪ್ರಕಾರ ನೋಡಿದರೆ ಅದರ ಅರ್ಥ ತಿಳಿಯುತ್ತದೆ. ಊರು ಎಂದರೇ ಶರೀರವೆಂದು ಜೀವಿಯು ನಿವಾಸಿಸುವ ಗೃಹವೆಂದು ಹೇಳಿಕೊಂಡಿದ್ದೇವೆ. ವಿವರವಾಗಿ ಹೇಳಿಕೊಂಡರೇ ಊಟೆಗಳು ಹೊಂದಿರುವುದು ಊರೆಂದು ಕೂಡಾ ಹೇಳಿಕೊಂಡಿದ್ದೇವೆ. ಈಗ ಜ್ಞಾನದ ಪ್ರಕಾರ ಹೊರಗಿನ ಊರಿನೊಳಗೆ ಹೋಗದಂತೆ ಶರೀರವನ್ನೇ ಊರಾಗಿ ಹೋಲಿಸಿಕೊಂಡು ನೋಡಬೇಕು. ಊರಲ್ಲದ ಊರು ನಮ್ಮ ಶರೀರವೆಂದು ತಿಳಿದುಹೋಗಿದೆ. ಇನ್ನು ಮುಖಕ್ಕಿರುವ ಬಾಯಿ ಅಲ್ಲದೆ ಇನ್ನೂ ಏನಾದರೂ 'ಬಾಯಲ್ಲದ ಬಾಯಿ' ಇದೆಯಾ ಎಂದು ನೋಡಿದರೆ, ಅಂಥಾದ್ದು ಒಂದಿದೆಯೆಂದು ತಿಳಿಯುತ್ತಿದೆ. ಶರೀರದೊಳಗೆ ಆಹಾರ, ಬಾಯಿ ಮುಖಾಂತರ ಹೋಗುತ್ತಿದೆ. ಬಾಯಿ ಮುಖಾಂತರ ಹೋಗುವ ಆಹಾರ ಶರೀರ ಆರೋಗ್ಯಕ್ಕೆ, ಶಕ್ತಿಗೆ ಉಪಯೋಗಪಡುತ್ತಿದೆ. ಶರೀರಕ್ಕೆ ಅನ್ನ ಆಹಾರವಾದಂತೆ, ಶರೀರದಲ್ಲಿರುವ ಜೀವಿಗೆ ಜ್ಞಾನ ಆಹಾರವಾಗುತ್ತಿದೆ. ಶರೀರಕ್ಕೆ ಆಹಾರವಾಗಿ ಉಪಯೋಗಪಡುವ ಅನೇಕ ವಿಧಗಳ ಪದಾರ್ಥಗಳು ಶರೀರಕ್ಕಿರುವ ರಂಧ್ರಗಳಲ್ಲಿ ಬಾಯಿ ಮೂಲಕ ಹೋಗುತ್ತಿವೆ. ಹಾಗೆಯೇ ಜೀವಿಗೆ ಆಹಾರವಾಗಿ ಉಪಯೋಗಪಡುವ ದೈವಜ್ಞಾನ ಕಿವಿ ಎನ್ನುವ ರಂಧ್ರದ ಮೂಲಕ ಒಳಗೆ ಹೋಗುತ್ತಿದೆ. ಆಹಾರ ಪದಾರ್ಥಗಳು ಜೀರ್ಣಾಶಯವನ್ನು ಸೇರಿ ಅಲ್ಲಿಂದ ಶರೀರಕ್ಕೆ ಹೋದರೆ ದೈವಜ್ಞಾನ ಎನ್ನುವುದು

ಶಬ್ದರೂಪದಲ್ಲಿ ಕಿವಿಯಿಂದ ಬುದ್ಧಿಗೆ ಸೇರಿ, ಬುದ್ಧಿಯಿಂದ ಜೀವಿಗೆ ಸೇರುತ್ತಿದೆ. ದೈವಜ್ಞಾನವನ್ನು ಸಂಪೂರ್ಣವಾಗಿ ತಿಳಿದ ಜೀವಿಯು ನಿವಾಸಿಸುವ ಶರೀರವು ಕೂಡಾ ಪವಿತ್ರವಾಗಿ ಹೋಗುತ್ತದೆ. ಜ್ಞಾನ ತಿಳಿದವನು ಯೋಗವನ್ನು ಆಚರಿಸುವುದರಿಂದ ಯೋಗಿಯಾಗಿ ಬದಲಾಗಿಹೋಗುತ್ತಾನೆ. ಯೋಗಿ ಆದವನಲ್ಲಿ ದೈವಶಕ್ತಿ (ಆತ್ಮಶಕ್ತಿ) ಏರ್ಪಡುತ್ತದೆ. ದೈವಶಕ್ತಿ ಇರುವ ಶರೀರ ಕೂಡಾ ಪವಿತ್ರವಾಗಿಹೋಗುತ್ತದೆ.

ಇಲ್ಲಿ ಆಹಾರ ಪದಾರ್ಥಗಳನ್ನು ತೆಗೆದುಕೊಳ್ಳುವ ತುಟಿಗಳ ರಂಧ್ರವನ್ನು ಬಾಯಿ ಎನ್ನುವಂತೆ, ಶಬ್ಧರೂಪದಲ್ಲಿರುವ ದೈವಜ್ಞಾನವನ್ನು ಸ್ವೀಕರಿಸುವ ಕಿವಿ ರಂಧ್ರವನ್ನು ಕೂಡಾ ಒಂದು ವಿಧವಾಗಿ ಬಾಯಿ ಎಂದು ಹೇಳಬಹುದು. ಬಾಯಿ ಎಂದರೇ ಊರಿನ ಒಂದು ದ್ವಾರ ಎಂದು ಅರ್ಥ. ಊರೊಂದರ ದ್ವಾರವನ್ನು ಬಾಯಿ ಎಂದಾಗ ಆಹಾರ ಪ್ರವೇಶಿಸುವ ತುಟಿಗಳ ರಂಧ್ರವನ್ನೂ ದೈವಜ್ಞಾನ ಶಬ್ಧ ಪ್ರವೇಶಿಸುವ ಕಿವಿ ರಂಧ್ರವನ್ನೂ ಬಾಯಿ ಎಂದು ಹೇಳಬಹುದು. ಇಲ್ಲಿ ಜ್ಞಾನ ತಿಳಿಯುವುದನ್ನು ಒಳ್ಳೆಯ ಕಿವಿ ಎಂದು ಹೇಳುತ್ತಾ ಕಿವಿಯನ್ನು ಒಳ್ಳೆಯ ಬಾಯಾಗಿ ಹೇಳುತ್ತಿದ್ದೇವೆ. ಕಿವಿ ಒಳ್ಳೆಯ ಜ್ಞಾನವನ್ನು ತಿಳಿಸುವುದಾದರೆ ಅದನ್ನು ಒಳ್ಳೆಯ ಬಾಯಿ ಎಂದು ಹೇಳುತ್ತಾ ಒಳ್ಳೆಯ ಜ್ಞಾನವನ್ನು ತಿಳಿದುಕೊಂಡ ಜೀವಿ ಇರುವ ಶರೀರ ಕೂಡಾ ಪವಿತ್ರವಾಗುವುದರಿಂದ “ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದಾಗುತ್ತದೆ” ಎಂದಿದ್ದಾರೆ. ಒಳ್ಳೆಯಬಾಯಿ ಎಂದರೇ ಒಳ್ಳೆಯ ಜ್ಞಾನವನ್ನು ತಿಳಿಸುವ ಕಿವಿ ಎಂದು, ಒಳ್ಳೆಯ ಊರು ಎಂದರೇ ಪವಿತ್ರತೆಯನ್ನು ಹೊಂದಿದ ಶರೀರವೆಂದು ತಿಳಿಯಬೇಕು.

**ಮನುಷ್ಯ ಸೃಷ್ಠಿಸಿದ ಮತವನ್ನು ಹಿಡಿದುಕೊಂಡು ಇಹದಲ್ಲಿ ಇರುತ್ತೀಯೋ, ದೇವರು ಸೃಷ್ಠಿಸಿದ ಜ್ಞಾನವನ್ನು ಹಿಡಿದುಕೊಂಡು ಪರಕ್ಕೆ ಹೋಗುತ್ತೀಯೊ ನೀನೇ ನಿರ್ಣಯಿಸಿಕೋ.**



## 44. ಭಿಕ್ಷಾಧಿಕಾರಿ ಆದರೂ ಆಗಬೇಕು. ಲಕ್ಷಾಧಿಕಾರಿ ಆದರೂ ಆಗಬೇಕು. ಭಿಕ್ಷಾಧಿಕಾರಿ ಯಾರು? ಲಕ್ಷಾಧಿಕಾರಿ ಯಾರು?

ಭಿಕ್ಷೆ ಎತ್ತಿಕೊಂಡು ಬದುಕುವವನು ಭಿಕ್ಷಾಧಿಕಾರಿಯೆಂದು, ಲಕ್ಷಗಳ ಧನವಿದ್ದು ಇತರರಿಗೆ ದಾನಕೊಡುವ ಸಾಮರ್ಥ್ಯ ಇರುವವನು ಲಕ್ಷಾಧಿಕಾರಿ ಯೆಂದು ಕರೆಯಲ್ಪಡುತ್ತಿದ್ದಾನೆ. ಯಾರಾದರೂ ಏನು ಬೇಕೆಂದುಕೊಂಡರೂ ತಾನು ಕಲೆಕ್ಟರ್ ಆಗಬೇಕೆಂದುಕೊಂಡರೂ, ಮಂತ್ರಿ ಆಗಬೇಕೆಂದುಕೊಂಡರೂ, ಯಾರೂ ತಾನು ಅಂದುಕೊಂಡಂತೆ ಆಗುವುದಿಲ್ಲ. ಏಕೆಂದರೇ! ಮನುಷ್ಯನನ್ನು ಪ್ರತಿಕ್ಷಣ ಶಾಸಿಸಿ ಆಡಿಸುವುದು ಒಂದು ಇದೆ. ಅದೇ ಕರ್ಮ ಎಂದು ಹೇಳುತ್ತಿದ್ದೇವೆ. ಪ್ರಾರಬ್ಧಕರ್ಮ ಹೇಗಿದ್ದರೇ ಹಾಗೆಯೇ ಮನುಷ್ಯನನ್ನು ಆತ್ಮ ನಡೆಸುತ್ತದೆ. ಶರೀರವನ್ನು ನಡೆಸುವುದು ಆತ್ಮ ಆದರೂ ಆತ್ಮ ಕರ್ಮವನ್ನು ಅನುಸರಿಸಿಯೇ ನಡೆಸುತ್ತದೆ. ಜೀವನದಲ್ಲಿ ಯಾರು ಏನು ಆಗಬೇಕೆನ್ನುವುದು, ಮೊದಲೇ ಕರ್ಮ ನಿರ್ಣಯಿಸಿರುತ್ತದೆ. ಅದರಪ್ರಕಾರವೇ ಅವನು ಜೀವಿಸಬೇಕಾಗಿದೆ. ಜೀವಿಯು ಪ್ರಪಂಚ ವಿಷಯಗಳಲ್ಲಿ ಸ್ವತಂತ್ರನಲ್ಲದೆ ಕರ್ಮವನ್ನು ಅನುಸರಿಸಿ ಆತ್ಮ ನಡೆಸುವಂತೆ ನಡೆಯಬೇಕಾಗಿದ್ದೆ. ಹಾಗಿರುವಾಗ ಜೀವಿಯು ತಾನು “ಆದರೇ ಭಿಕ್ಷಾಧಿಕಾರಿಯಾದರೂ ಆಗಬೇಕು ಇಲ್ಲದಿದ್ದರೆ ಲಕ್ಷಾಧಿಕಾರಿ ಯಾದರೂ ಆಗಬೇಕು” ಎಂದುಕೊಳ್ಳುವುದು ವೃಥಾ ಪ್ರಯಾಸ. ಆತನು ಅಂದುಕೊಂಡರೂ ಭಿಕ್ಷಾಧಿಕಾರಿ ಆಗಲಾರನು, ಲಕ್ಷಾಧಿಕಾರಿ ಆಗಲಾರನು. ಕರ್ಮದಲ್ಲಿ ಏನು ಆಗಬೇಕೆಂದಿದ್ದರೆ ಅದೇ ಆಗುತ್ತಾನೆ ಆದರೆ ಯಾರ ಇಷ್ಟದ ಪ್ರಕಾರ ನಡೆಯುವುದಿಲ್ಲ ಎಂದು ಮೊದಲೇ ಹೇಳಿಕೊಂಡಿದ್ದೇವೆ. ಹಾಗಿರುವಾಗ ತಿಳಿದ ಜ್ಞಾನಿಗಳು, ಈ ವಾಕ್ಯವನ್ನು ಏಕೆ ಹೇಳಿದ್ದಾರೆಂದು ಪ್ರಶ್ನೆಬರಬಲ್ಲದು. ಕರ್ಮ ಪ್ರಕಾರವೇ ಮಾನವನಿಗೆ ನಡೆಯುತ್ತಿದೆಯೆಂದು ತಿಳಿದಿಲ್ಲವಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ!

ಆಧ್ಯಾತ್ಮಿಕ ರೀತಿಯಲ್ಲಿ ಭಿಕ್ಷಾಧಿಕಾರಿ ಎಂದರೇ ಜ್ಞಾನವೆನ್ನುವ ಭಿಕ್ಷೆ ಕೇಳುವವನೆಂದು ಅರ್ಥ ಮಾಡಿಕೊಳ್ಳಬೇಕು. ಜೀವಿಗೆ ಪ್ರಪಂಚ ವಿಷಯಗಳಲ್ಲಿ ಸ್ವತಂತ್ರವಿಲ್ಲ. ಪ್ರಪಂಚ ವಿಷಯಗಳನ್ನು ಕರ್ಮ ಶಾಸಿಸಿ ನಡೆಸುತ್ತದೆ. ಆದರೇ

ದೈವಜ್ಞಾನ ವಿಷಯದಲ್ಲಿ ಜೀವಿಗೆ ಸರ್ವಸ್ವತಂತ್ರವಿದೆ. ದೈವಜ್ಞಾನ ವಿಷಯಗಳಲ್ಲಿ ಕರ್ಮ ಅಧಿಪತ್ಯ ಇರುವುದಿಲ್ಲ. ಜ್ಞಾನ ವಿಯಷಯಗಳ ಮೇಲೆ ಕರ್ಮ ಕೆಲಸ ಮಾಡುವುದಿಲ್ಲ. ಜ್ಞಾನ ಕರ್ಮಕ್ಕೆ ಅತೀತವಾದುದು. ಆದ್ದರಿಂದ ಜ್ಞಾನ ವಿಷಯಗಳಲ್ಲಿ ಜೀವಿಯು ಏನಾದರೂ ಅಂದುಕೊಂಡಿರುವುದು ಅಂದು ಕೊಂಡಂತೆ ಸಾಧಿಸಬಲ್ಲನು. ಜ್ಞಾನಭಿಕ್ಷೆಯನ್ನು ಕೋರುವ ಭಿಕ್ಷಾಧಿಕಾರಿಯಾಗಿ ಬದಲಾಗಿಹೋಗಬಲ್ಲನು. ಹಾಗೆ ಭಿಕ್ಷಾಧಿಕಾರಿಯಾಗಿ ಬದಲಾಗುವುದರಿಂದ ಜ್ಞಾನ ವಿಷಯಗಳನ್ನು ಪೂರ್ತಿಯಾಗಿ ತಿಳಿಯುತ್ತಾನೆ. ಜ್ಞಾನ ತಿಳಿಯದಿರುವಾಗ ಭಿಕ್ಷಾಧಿಕಾರಿಯಾಗಿ ಬದಲಾಗುವುದರಲ್ಲಿ ತಪ್ಪಿಲ್ಲ. ಒಂದುವೇಳೆ ದೈವಜ್ಞಾನ ತಿಳಿದಿದ್ದರೆ ಇನ್ನೊಬ್ಬರಿಗೆ ದಾನ ಮಾಡುವಂತಹ ಲಕ್ಷಾಧಿಕಾರಿಯಾಗಿ ಬದಲಾಗಿಹೋಗುವುದು ಒಳ್ಳೆಯದು. ನೀನು ಅಜ್ಞಾನಿಯೇ ಆದರೇ ಜ್ಞಾನಭಿಕ್ಷೆಗಾಗಿ ಪ್ರಯತ್ನಿಸುತ್ತಾ ಭಿಕ್ಷಾಧಿಕಾರಿಯಾಗಿ ಆದರೂ ಬದಲಾಗಬೇಕು. ಇಲ್ಲದೆ ಹೋದರೆ ನೀನು ಜ್ಞಾನಿಯಾಗಿ ಹುಟ್ಟಿದ್ದರೆ ನಿನಗೆ ತಿಳಿದ ದೈವಜ್ಞಾನವನ್ನು ಇತರರಿಗೆ ಬೋಧಿಸುವ ಬೋಧಕನಾಗಿಯಾದರೂ ಬದಲಾಗಿಹೋಗು. ಇತರರಿಗೆ ಬೋಧಿಸುವ ಸಾಮರ್ಥ್ಯ ಇರುವವನು ಜ್ಞಾನಧನದಿಂದ ಲಕ್ಷಾಧಿಕಾರಿಗೆ ಸಮಾನವೇ ಆಗುತ್ತಾನೆ. ಆದ್ದರಿಂದ ನಮ್ಮ ಹಿರಿಯರು ಹುಟ್ಟಿದ ಪ್ರತಿಯೊಬ್ಬರಿಗು ಜ್ಞಾನಮಾರ್ಗದಲ್ಲಿ ಭಿಕ್ಷಾಧಿಕಾರಿಯಾಗಾದರೂ ಇರು ಇಲ್ಲದಿದ್ದರೆ ಲಕ್ಷಾಧಿಕಾರಿ ಯಾಗಾದರೂ ಇರು ಎಂದು ಹೇಳಿದ್ದಾರೆ. ಅವರು ಹೇಳಿರುವುದು ಜ್ಞಾನವಿಷಯ ದಲ್ಲಿ ಆದ್ದರಿಂದ ಕರ್ಮಕ್ಕೆ ಜ್ಞಾನ ಅತೀತವಾದುದಾದ್ದರಿಂದ ಯಾರಾದರೂ ಹೇಗಾದರೂ ಬದಲಾಗಬಹುದು. ಜ್ಞಾನ ತಿಳಿದವನಾದರೆ ಲಕ್ಷಾಧಿಕಾರಿಯಾ ಗಾದರೂ ಬದಲಾಗಬಹುದು. ಜ್ಞಾನ ತಿಳಿಯದವನಾದರೆ ಜ್ಞಾನವನ್ನು ಕೇಳಿಕೊಳ್ಳುವ ಭಿಕ್ಷಾಧಿಕಾರಿಯಾಗಿ ಆದರೂ ಬದಲಾಗಬಹುದೆಂದು ನಮ್ಮ ಹಿರಿಯರು ಈ ಒಗಟಿನಲ್ಲಿ ಹೇಳಿದ್ದಾರೆ.

**ಮನುಷ್ಯ ಸೃಷ್ಟಿಸಿದ ಮತ ಇಹಕ್ಕೆ ಸಂಬಂಧಿಸಿರುವುದು.**

**ದೇವರು ಸೃಷ್ಟಿಸಿದ ಜ್ಞಾನ ಪರಮಪದಕ್ಕೆ ಸಂಬಂಧಿಸಿರುವುದು.**

# 45. ಮಂತ್ರ ಜಲಕ್ಕಿಂತ ಮಂಗಳ ಜಲವೆಚ್ಚು

ಪೂರ್ವದಲ್ಲಿ ಈ ವಾಕ್ಯದಲ್ಲಿ 'ಜಲ' ಎನ್ನುವ ಪದವಿರುವಕಡೆ 'ಬಲ' ಎನ್ನುವ ಪದ ಇರುತ್ತಿತ್ತು. ವಾಸ್ತವಕ್ಕೆ "ಮಂತ್ರಬಲಕ್ಕಿಂತ ಮಂಗಳಬಲವೆಚ್ಚು" ಎಂದು ಇತ್ತು. ಬಲ ಎನ್ನುವಕಡೆ "ಬ"ಗೆ ಬದಲಾಗಿ "ಜ" ಬಂದು ಸೇರುವುದರಲ್ಲಿ ಬಲ ಸ್ವಲ್ಪ ಜಲವಾಗಿ ಬದಲಾಗಿಹೋಗಿದೆ. ಈ ವಾಕ್ಯದಲ್ಲಿ ಮಂಗಳ, ಮಂತ್ರ ಎನ್ನುವ ಎರಡು ಪದಗಳೇ ಮುಖ್ಯವಾದ್ದರಿಂದ ಬಲ ಜಲವಾಗಿ ಬದಲಾದರೂ ಸ್ವಲ್ಪಮಟ್ಟಿನ ವ್ಯತ್ಯಾಸದಿಂದ ಅರ್ಥವನ್ನು ಹೇಳಿಕೊಳ್ಳಬಹುದು. ಮಂತ್ರಜಲಕ್ಕಿಂತ ಮಂಗಳ ಜಲವೆಚ್ಚು ಎನ್ನುವಮಾತು ಹೊರಗಿನ ಅರ್ಥಕ್ಕೆ ಪೂರ್ತಿ ಹತ್ತಿರವಾಗಿದೆ. ಆದ್ದರಿಂದ ಮಂತ್ರಬಲ ಎಂದು ಹೇಳುವುದಕ್ಕಿಂತ, ಮಂತ್ರಜಲ ಎಂದು ಬಹಳಜನ ಹೇಳಿಕೊಳ್ಳುವುದು ನಡೆಯುತ್ತಿದೆ. ಬ್ರಾಹ್ಮಣ, ನಾಯಿ ಬ್ರಾಹ್ಮಣ ಎನ್ನುವ ಬ್ರಾಹ್ಮಣ ಕುಲಗಳು ಎರಡು ಇವೆ. ನಾಯಿ ಬ್ರಾಹ್ಮಣರು ಎನ್ನುವ ಹೆಸರು ಮಂಗಳಿಗರಿಗೆ (ಕ್ಷೌರಿಕರಿಗೆ) ಬರುವುದೂ ಅವರು ಹೇಳಿಕೊಳ್ಳುವುದೂ ನೋಡಿದರೆ ವಾಸ್ತವಕ್ಕೆ ಅವರಿಗೆ ತಿಳಿಯದೆ ಆ ಹೆಸರನ್ನು ಇಟ್ಟುಕೊಂಡಿದ್ದಾರೆಂದನಿಸುತ್ತದೆ. ಕುತಂತ್ರದಿಂದ ಮಂಗಳರನ್ನು ಉನ್ನತ ಸ್ಥಾನಕ್ಕೆ ಬರದಂತೆ ಮಾಡಬೇಕೆನ್ನುವ ಅಸೂಯೆಯಿಂದ ಕೆಲವರು ತಿಳುವಳಿಕೆಯುಳ್ಳವರು ಅವರನ್ನು ಅವಹೇಳನಮಾಡುವ ವಿಧವಾಗಿ ನಾಯಿ ಬ್ರಾಹ್ಮಣರೆಂದು ಹೆಸರು ಇಟ್ಟಾಗ ಮಂಗಳರಿಗೆ ಆ ಹೆಸರಿನಲ್ಲಿನ ಅರ್ಥ ತಿಳಿಯದೆ ಅದನ್ನೇ ಮುಖ್ಯವಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಮಂಗಳಿ ಎನ್ನುವುದು ಪವಿತ್ರವಾದ ಪದವೆಂದು ತಿಳಿಯದೆ, ಮಂಗಳರೆಲ್ಲರೂ ನಾಯಿ ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಿದ್ದಾರೆ. ಇಂದು ಮಂಗಳರಾಗಿರುವವರೆಲ್ಲರೂ ಪೂರ್ವ ಬ್ರಾಹ್ಮಣ ಕುಲಕ್ಕೆ ಸೇರಿದವರೆಂದು ತಿಳಿದಿಲ್ಲ.

ಚರಿತ್ರೆ ತಿಳಿದವರಿಗೆ ಮಂಗಳರಿಗೆ ಅನ್ಯಾಯ ನಡೆದಿದೆಯೆಂದು ತಿಳಿದಿದೆ. ಆದ್ದರಿಂದ ಮಂಗಳರು ಪೂರ್ವದ ಬ್ರಾಹ್ಮಣರೆಂದು ಗುರುತಿರುವಂತೆ ಬಹುಶ ಈ ವಾಕ್ಯವನ್ನು ಹೇಳಿದ್ದಾರೆಂದು ಅಂದುಕೊಳ್ಳುತ್ತಿದ್ದೇನೆ. ಹೇಗಾದರೇನು ಇಂದಿನ ಬ್ರಾಹ್ಮಣರಿಗಿಂತ ಮಂಗಳರೇ ದೊಡ್ಡವರು ಎನ್ನುವಂತೆ ಈ ವಾಕ್ಯವಿದೆ. ಈ ವಾಕ್ಯವೊಂದರ ವಿವರವನ್ನು ವಿವರಿಸಿಕೊಳ್ಳೋಣ. ಮಂತ್ರಗಳಿಂದ ಸಂಬಂಧ

ಇರುವವರು ಈಗಿನ ಬ್ರಾಹ್ಮಣರೇಯೆಂದು ಎಲ್ಲರೂ ಹೇಳಬಲ್ಲರು. ಬ್ರಾಹ್ಮಣರು ಕೆಲವು ಕಾರ್ಯಗಳಲ್ಲಿ ಮಂತ್ರಗಳನ್ನು ಉಚ್ಛರಿಸುತ್ತಾ ಮಂತ್ರದ ನೀರನ್ನು ನಮ್ಮ ತಲೆಗಳ ಮೇಲೆ ಚೆಲ್ಲುವುದು ಎಲ್ಲರಿಗೂ ತಿಳಿದ ವಿಷಯವೇ. ಕೆಲವು ಕಾರ್ಯಗಳಲ್ಲಿ ನಮ್ಮಲ್ಲಿನ ಅಪವಿತ್ರತೆ ಹೋಗುವುದಕ್ಕೆ ಕೆಲವು ಕಾರ್ಯಗಳಲ್ಲಿ ನಾವು ಪುನೀತರಾಗುವುದಕ್ಕೆ ಮಂತ್ರಜಲವನ್ನು ತಲೆಗಳಮೇಲೆ ಚೆಲ್ಲುತ್ತಿರುತ್ತಾರೆ. ಹಾಗೆ ಚೆಲ್ಲುವುದರಿಂದ ತಲೆಯಲ್ಲಿನ ಪಾಪಗಳೆಲ್ಲ ಹೋಗುತ್ತವೆಯೆಂದು ನಾವು ನಂಬುತ್ತಿದ್ದೇವೆ ಅಲ್ಲವೇ! ಒಂದು ಕಾರ್ಯಕ್ರಮದಲ್ಲಿ ಒಂದು ಅರ್ಧಗಂಟೆ ಸಮಯ ಮಂತ್ರಗಳನ್ನು ಓದುತ್ತಾ ಕಾರ್ಯಕ್ರಮಗಳನ್ನು ಮಾಡಿದ ಬ್ರಾಹ್ಮಣನು ಕೊನೆಯಲ್ಲಿ ಮಾವಿನ ಎಲೆಗಳನ್ನು ನೀರಿನಲ್ಲಿ ಅದ್ದಿ ಅಲ್ಲಿರುವ ಎಲ್ಲರಮೇಲೆ ಚೆಲ್ಲುವುದು ನಡೆದಿದೆ. ಅಲ್ಲಿಯವರೆಗು ಕುಳಿತುಕೊಂಡವರಲ್ಲಿ ಒಬ್ಬನು ಹೊತ್ತುಹೋಗದೆ ಬೇಸರಗೊಳ್ಳುತ್ತಾ ಆಗಾಗ ನಿದ್ರೆಯೊಳಗೆ ಜಾರಿಕೊಳ್ಳುತ್ತಿದ್ದನು. ನಿದ್ರೆಯೊಳಗೆ ಹೋಗಿ ಹೋಗದೆ ಇರುವಾಗ ಬ್ರಾಹ್ಮಣನು ಮಾವಿನ ಎಲೆಗಳಿಂದ ನೀರು ಚೆಲ್ಲುವುದರಿಂದ ಬರುವ ನಿದ್ರೆಯಿಂದ ಎಬ್ಬಿಸಿದಂತಾಗಿದೆ. ಅದರಿಂದ ಅಲ್ಲಿಯವರೆಗು ಮಂತ್ರಗಳು ಅರ್ಥವಾಗದೆ ಬೇಸರಗೊಂಡ ಅವನು ಮುಖದ ಮೇಲೆ ನೀರು ಬೀಳುವುದರಿಂದ ಬ್ರಾಹ್ಮಣನಮೇಲೆ ಹಿಡಿಯಲಾರದಷ್ಟು ಕೋಪಬಂದಿದೆ. ಆದರೂ ಇದೇನೊ ನಮಗಾಗಿ ಮಾಡುವ ಕಾರ್ಯ ಅಲ್ಲವೆಯೆಂದು ಆ ಸಮಯಕ್ಕೆ ಸಹಿಸಿಕೊಂಡಿದ್ದಾನೆ. ಆ ಕಾರ್ಯವೆಲ್ಲವೂ ಮುಗಿದುಹೋದ ನಂತರ ಊಟಮಾಡಿ ತಲೆಕೂದಲನ್ನು ಬೋಳಿಸಿಕೊಳ್ಳುವುದಕ್ಕೆ ಮಂಗಳಿಷಾಪ್‌ಗೆ ಮಂತ್ರಗಳು ಓದುತ್ತಿರುವಾಗ ಬೇಸರಗೊಂಡ ಮನುಷ್ಯ ಹೋಗಿದ್ದಾನೆ. ಅಲ್ಲಿ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಲೇ ಅಲ್ಲಿರುವ ಮಂಗಳಿ ತಲೆಕೂದಲನ್ನು ಬೋಳಿಸುವುದಕ್ಕೆ ಮೊದಲು ಕೂದಲೆಲ್ಲವನ್ನು ಒಂದು ಲೆವಲ್‌ಗೆ ಸರಿಮಾಡುವುದಕ್ಕೆ ಕೈಯಿಟ್ಟು ಸರಿಪಡಿಸುತ್ತಾ ಸ್ವಲ್ಪ ನೀರನ್ನು ಚೆಲ್ಲಿ ಕೂದಲನ್ನು ಸರಿಪಡಿಸುತ್ತಿದ್ದನು. ಆಗ ಮಂಗಳಿ ನೀರು ಚಲ್ಲಿ ಕೂದಲನ್ನು ಸರಿಪಡಿಸುವುದರಲ್ಲಿ ಆತನಿಗೆ ಎಷ್ಟೋ ಸುಖವಾಗಿ ಇರುವುದರಿಂದ ನಿಧಾನವಾಗಿ ನಿದ್ರೆಯೊಳಗೆ ಹೋಗಿದ್ದಾನೆ. ಹಾಗೆ ಎಷ್ಟು ಸಮಯ ಇದ್ದಾನೊ ಆತನಿಗೆ ಗೊತ್ತಿಲ್ಲ. ಕೂದಲುಗಳೆಲ್ಲ ಬೋಳಿಸುವುದು ಮುಗಿದ ನಂತರ ಎದ್ದಿದ್ದಾನೆ. ತಾನು

ಅಲ್ಲಿಯವರೆಗು ನಿದ್ರೆಹೋಗಿದ್ದೇನೆಂದು ತಿಳಿದುಕೊಂಡು ಆ ಮಂತ್ರ ಜಲಕ್ಕಿಂತ ಈ ಮಂಗಳಿ ಜಲವೇ ಚೆನ್ನಾಗಿದೆಯೆಂದು ಹೇಳಿದನಂತೆ. ಅಂದಿನಿಂದ "ಮಂತ್ರಜಲಕ್ಕಿಂತ ಮಂಗಳಿ ಜಲವೆಚ್ಚು" ಎನ್ನುವ ಮಾತು ಸಮಾಜದಲ್ಲಿ ಅಲ್ಲಲ್ಲಿ ಕೇಳಿಸುತ್ತಿದೆ. ಬಾಹ್ಯವಾಗಿರುವ ವಿಷಯವಿದೇ ಆದರೂ ಆಧ್ಯಾತ್ಮಿಕರೀತಿಯಲ್ಲಿ ಇನ್ನೊಂದು ವಿಧಾನದಲ್ಲಿ ಈ ವಾಕ್ಯಕ್ಕೆ ಅರ್ಥ ಏನಾದರೂ ಇದೆಯೇನೊ ವಿವರವಾಗಿ ನೋಡೋಣ.

ಮಂತ್ರ ಎಂದರೇ ಮಹಿಮೆ ಇರುವುದು. ಶಕ್ತಿಯಿರುವುದು ಎಂದು ಮೊದಲೇ ಹೇಳಿಕೊಂಡಿದ್ದೇವೆ. ಮಂತ್ರವನ್ನು ಜ್ಞಾನ ಇರುವವರೇ ತಯಾರು ಮಾಡುತ್ತಾರೆಂದು ಕೂಡಾ ಹೇಳಿಕೊಂಡಿದ್ದೇವೆ. ಮಂತ್ರಕ್ಕೆ ಸ್ವಲ್ಪ ಶಕ್ತಿ ಇರುವುದು ವಾಸ್ತವವೇ ಆದರೂ ಆ ಶಕ್ತಿಗಳು ಒಂದೊಂದು ಮಂತ್ರಕ್ಕೆ ಒಂದೊಂದು ವಿಧವಾಗಿರುತ್ತದೆ. ಎಷ್ಟೋ ವಿಧಗಳ ಮಂತ್ರಗಳಿಗೆ ಎಲ್ಲಾ ವಿಧಗಳ ಶಕ್ತಿಗಳಿರುತ್ತವೆ. ಆಯಾ ಮಂತ್ರಗಳನ್ನು ಉಚ್ಛರಿಸಿದಾಗ ಆ ಮಂತ್ರಶಕ್ತಿ ಚೆಲ್ಲುವ ನೀರಿನೊಳಗೂ ಕೂಡಾ ಬರುತ್ತದೆ. ಆ ಮಂತ್ರ ಶಕ್ತಿಯಿಂದ ಸ್ವಲ್ಪ ಒಳ್ಳೆಯದು ನಮಗೆ ನಡೆಯ ಬಹುದು. ಯಾವ ಒಳ್ಳೆಯದು ನಡೆದರೂ ಅದು ಪ್ರಪಂಚಕ್ಕೆ ಸಂಬಂಧಿಸಿರುವುದೇ ಆಗಿರುತ್ತದೆ. ದೈವತ್ವಕ್ಕೆ ಯಾವ ಸಂಬಂಧ ಇರುವುದಿಲ್ಲ. ಇಲ್ಲಿಯವರೆಗು ಮಂತ್ರವೊಂದರ ವಿಷಯವನ್ನು ತಿಳಿದುಕೊಂಡಿದ್ದೇವೆ. ಈಗ ಮಂಗಳಿವೊಂದರ ವಿಷಯವನ್ನು ಕುರಿತು ತಿಳಿದುಕೊಳ್ಳೋಣ.

ಮಂಗಳ ಎಂದರೇ ಶುಭಕರವೆಂದು ಅರ್ಥ. ಮಂಗಳಿ ಎಂದರೇ ಶುಭಕರವಾದವನು ದೇವರು ಎಂದು ಅರ್ಥ. ಪೂಜಾ ಕಾರ್ಯಗಳಲ್ಲಿ ಕೊನೆಯಲ್ಲಿ ದೇವರೊಳಗೆ ಐಕ್ಯವಾಗುವ ಸಂಕಲ್ಪವನ್ನು ತಿಳಿಸುವುದಕ್ಕೆ ಮಂಗಳಹಾರತಿ ಕೊಡುತ್ತಿರುತ್ತಾರೆ. ಮಂಗಳ ಎಂದರೇ ಮೋಕ್ಷವೆಂದು ಅರ್ಥ. ಮೋಕ್ಷವೆಂದರೂ ದೇವರೆಂದರೂ ಶುಭಕರವಾದವನು ಎಂದರೂ ಎಲ್ಲಾ ಪರಮಾತ್ಮಗೆ ಸಂಬಂಧಿಸಿದ ವಿವರಣೆ ಎಂದು ತಿಳಿಯಬೇಕು. ಮಂಗಳಿ ಜಲ ಎಂದರು ದೈವಶಕ್ತಿ ಇರುವ ನೀರು ಎಂದು ಅರ್ಥ. ಪೂರ್ವದಲ್ಲಿ ಮಂಗಳಿ ಬಲವೆಂದು ಇರುತ್ತಿತ್ತು. ಮಂಗಳಿ ಬಲ ಎಂದರೇ ದೈವಶಕ್ತಿ ಎಂದೇ ಅರ್ಥ.

ಮಂಗಳಿ ಜಲ ಎಂದರು ದೈವಶಕ್ತಿ ಒಳಗೊಂಡಿರುವ ಜಲ ಎಂದು ಅರ್ಥ ವಾಗುತ್ತದೆ. ಬಲಕ್ಕೆ, ಜಲಕ್ಕೆ ಏನು ವ್ಯತ್ಯಾಸಬರುವುದಿಲ್ಲ. ಮಂತ್ರ ಬಲ ಹೊಂದಿದ ನೀರಿನಿಂದ ಸ್ವಲ್ಪ ಮಂತ್ರಶಕ್ತಿ ಉಪಯೋಗಬಿದ್ದು ಪ್ರಪಂಚ ಕಾರ್ಯ ನೆರವೇರುತ್ತಿದೆ. ಇದೇ ಮಂಗಳಿಜಲ (ದೈವಶಕ್ತಿ) ದಿಂದ ಪ್ರಪಂಚ ಕಾರ್ಯ ನೆರವೇರದೆ ನಮ್ಮ ಶರೀರದಲ್ಲಿ ಜನ್ಮಗಳಿಗು ಕಷ್ಟಸುಖಗಳಿಗು ಕಾರಣವಾದ ಕರ್ಮ ಇಲ್ಲದಂತೆ ಹೋಗುತ್ತಿದೆ. ಕರ್ಮಗಳು ನಶಿಸುವುದಕ್ಕೆ ಮಂತ್ರ ಬಲವಾಗಲಿ ಮಂತ್ರಜಲವಾಗಲಿ ಉಪಯೋಗಪಡುವುದಿಲ್ಲ. ಮನುಷ್ಯನ ಕರ್ಮಗಳು ಒಂದು ದೈವಶಕ್ತಿಯಿಂದಲೇ ನಶಿಸಿಹೋಗಬಲ್ಲವು. ಪ್ರಪಂಚದಲ್ಲಿ ದೈವಶಕ್ತಿ ಹೊರತು ಯಾವ ಶಕ್ತಿ ಕರ್ಮವನ್ನು ಇಲ್ಲದಂತೆ ಮಾಡಲಿಲ್ಲ. ಕರ್ಮಗಳನ್ನು ನಾಶ ಮಾಡುವ ದೈವಶಕ್ತಿ (ಮಂಗಳ ಬಲ) ಎಲ್ಲಾ ಶಕ್ತಿಗಳಿಗಿಂತ ಉತ್ತಮವಾದುದು. ಆದ್ದರಿಂದ "ಮಂತ್ರಜಲಕ್ಕಿಂತ ಮಂಗಳಿ ಜಲಹೆಚ್ಚು" ಎಂದು ಆಧ್ಯಾತ್ಮಿಕ ಜ್ಞಾನರೀತಿಯಲ್ಲಿ ಹೇಳಿದ್ದಾರೆಂದು ತಿಳಿಯುತ್ತಿದೆ.

**ಮನುಷ್ಯನ ಇಷ್ಟದಿಂದ ಕೂಡಿಕೊಂಡಿರುವುದು ಮತ**
**ದೇವರ ಇಷ್ಟದಿಂದ ಕೂಡಿಕೊಂಡಿರುವುದು ಜ್ಞಾನ.**

## 46. ನಿನ್ನ ಕೂಳು ತಿಂದು, ನಿನ್ನ ಬಟ್ಟೆಕಟ್ಟಿ, ನನಗೆ ಸಂಸಾರ ಮಾಡೆದಿಂದ್ದಾನಂತೆ, ಯಾರು?

ಯಾವ ಮನುಷ್ಯನಿಗಾದರೂ ಪ್ರತಿಯೊಂದು ಅವನ ಪ್ರಾರಬ್ಧಕರ್ಮ ವನ್ನನುಸರಿಸಿ ಲಭಿಸುತ್ತಿರುತ್ತದೆ. ಮನುಷ್ಯ ಬದುಕುತ್ತಿದ್ದಾನೆಂದರೇ ಅವನು ಅವನ ಕರ್ಮಪ್ರಕಾರವೇ ಬದುಕುತ್ತಿದ್ದಾನೆಂದು ಹೇಳಬಹುದು. ಕರ್ಮದಲ್ಲಿಲ್ಲದ್ದು ಅವನಿಗೆ ಲಭಿಸುವುದಿಲ್ಲ. ಮನುಷ್ಯನಿಗೆ ನಿತ್ಯ ಅಗತ್ಯವಾಗಿರುವುದು ಕೂಳು ಬಟ್ಟೆ. ಆ ಕೂಳು ಬಟ್ಟೆ ಕೂಡಾ ಅವನ ಕರ್ಮಪ್ರಕಾರವೇ ಅವನಿಗೆ ದೊರೆಯುತ್ತದೆ. ನಿತ್ಯ ಅವನ ಕರ್ಮಪ್ರಕಾರ ಬದುಕುವ ಜೀವಿಯು ಹಳೆಕರ್ಮವನ್ನು ಅನುಸರಿಸಿ ಬದುಕುತ್ತಿದ್ದರೂ, ಅವನು ತನ್ನ ಕರ್ಮಪ್ರಕಾರ ಬದುಕುತ್ತಿದ್ದೇನೆಂದು ಅಂದು ಕೊಳ್ಳದಿರುವುದರಿಂದ, ತಾನೇ ತನ್ನ ತಿಳುವಳಿಕೆಯಿಂದ ಕೆಲಸಗಳು ಮಾಡುತ್ತಿದ್ದೇ

ನೆಂದು ಅಂದುಕೊಳ್ಳುವುದರಿಂದ, ಒಂದುಕಡೆ ಹಳೆಕರ್ಮ ಮುಗಿದುಹೋಗುತ್ತಾ ಒಂದು ಕಡೆ ಹೊಸಕರ್ಮ ಬಂದು ಸೇರುತ್ತಿದೆ. ಇದಕ್ಕೆಲ್ಲ ಕಾರಣ ಹಳೆ ಕರ್ಮದಿಂದಲೇ ತಿನ್ನುವ ತಿಂಡಿ ಕಟ್ಟುವ ಬಟ್ಟೆ ಲಭಿಸುತ್ತಿದೆಯೆಂದು ತಿಳಿಯದೇ ಹೋಗುವುದೆಂದು ಹೇಳಬಹುದು. ಒಂದುವೇಳೆ ಹಳೆಕರ್ಮದಿಂದಲೇ ಎಲ್ಲಾ ಲಭಿಸುತ್ತಿವೆಯೆಂದು ತಿಳಿದರೂ ಮಾಡುವ ಕೆಲಸವನ್ನು ನಾನೇ ಮಾಡುತ್ತಿದ್ದೇನೆನ್ನುವ ಅಹಂಭಾವ ಇರುವುದರಿಂದ ಹಳೆಕರ್ಮ ಮುಗಿದುಹೋದರೂ ಹೊಸ ಕರ್ಮ ಬಾರದೆತಪ್ಪಲ್ಲ. ಮೇಲಿನ ವಾಕ್ಯದಲ್ಲಿ ನಿನ್ನ ಕೂಳು ತಿಂದು, ನಿನ್ನ ಬಟ್ಟೆಕಟ್ಟಿ ಎಂದು ಇದೆ. ಆ ಮಾತಿಗೆ ನಿನ್ನ ಕರ್ಮಪ್ರಕಾರ ಬರುವ ಫಲಿತವನ್ನು ನೀನು ಅನುಭವಿಸುತ್ತಾ ಎಂದು ಅರ್ಥ.

ಮೇಲಿನ ವಾಕ್ಯದಲ್ಲಿ ಒಗಟಿನಲ್ಲಿ ನನಗೆ ಸಂಸಾರ ಮಾಡೆಂದಿದ್ದಾನಂತೆ ಎಂದು ಇದೆ. ನನ್ನೊಂದಿಗೆ ಸಂಸಾರ ಮಾಡು ಎಂದರೇ ನನ್ನೊಂದಿಗೆ ಬೆರೆತು ಇರಬೇಕೆಂದು, ನನಗೆ ಸೇವೆ ಮಾಡೆಂದು ಅರ್ಥ ಅಲ್ಲವೆ! ಈ ಮಾತಿನ ಪ್ರಕಾರ ಒಬ್ಬ ಮನುಷ್ಯ ತನ್ನ ಪ್ರಾರಬ್ಧ ಪ್ರಕಾರ ಅವನ ಕೂಳು ತಿಂದು ಅವನ ಬಟ್ಟೆ ಕಟ್ಟಿಕೊಂಡರೂ ದೇವರ ಸೇವೆ ಮಾಡುತ್ತಾ ದೇವರ ಯೋಗ ಮಾಡುತ್ತಾ ಇದ್ದಂತಾದರೆ ಅವನಿಗೆ ಪ್ರಾರಬ್ಧಕರ್ಮ ಮುಗಿದುಹೋಗುತ್ತಿರುತ್ತದೆ. ಆಗಾಮಿ ಎನ್ನುವ ಹೊಸ ಕರ್ಮ ಬಾರದಂತಿರುತ್ತದೆ. ದೇವರಿಗೆ ಸೇವೆಮಾಡುವುದು ಆತನ ಜ್ಞಾನವನ್ನು ತಿಳಿದುಕೊಂಡು ದೇವರನ್ನು ಕುರಿತು ಯೋಗ ಮಾಡುವುದು ಎನ್ನುವ ಕಾರ್ಯವನ್ನು ಮಾಡಿದವನು ದೇವರೊಂದಿಗೆ ಸಂಸಾರ ಮಾಡಿದಂತಾಗುತ್ತದೆ. ದೇವರ ಸೇವೆ ಯೋಗ ಮಾಡಿದವನಿಗೆ ಮಾತ್ರ ಕೂಳು ಬಟ್ಟೆ ಲಭಿಸುವುದು ಅವನ ಕರ್ಮಾನುಸಾರವೇ ನಡೆಯುತ್ತಿರುತ್ತದೆ. ಆದ್ದರಿಂದ ನೀನು ದೇವರ ಸೇವೆ ಮಾಡುವುದಕ್ಕೆ ಪ್ರಾರಂಭಮಾಡು ನಿನ್ನ ಕರ್ಮ ಮುಗಿದುಹೋಗುತ್ತಾ ಬರುತ್ತದೆ. ದೇವರ ಸೇವೆ ಮಾಡುವುದರಿಂದ ಹೊಸಕರ್ಮ ಬರುವುದಿಲ್ಲ. ಆದ್ದರಿಂದ ನನಗೆ ಸಂಸಾರ ಮಾಡಿದರೂ ನಾನು ನಿನಗೆ ಕೂಳು ಬಟ್ಟೆ ಕೊಡುತ್ತೇನೆಂದು ದೇವರು ಹೇಳಲಿಲ್ಲ. ಅವೆಲ್ಲ ನಿನ್ನವೇಯೆಂದು ಹೇಳಿದ್ದಾನೆ. ದೇವರು ಬದುಕುವುದಕ್ಕೆ ಕೂಳು ಬಟ್ಟೆಗಳನ್ನು ಕರ್ಮಗಳನ್ನು

ಕೊಡುವುದಿಲ್ಲ. ಆತನು ನೇರವಾಗಿ ಅಮೃತವನ್ನೇ ಕೊಟ್ಟು, ಜನ್ಮಿಸಿ ಕೂಳು ಬಟ್ಟೆಗಾಗಿ ಆಶಿಸದಂತೆ ಜನ್ಮವಿಲ್ಲದ ಮೋಕ್ಷವನ್ನು ಕೊಡುತ್ತಾನೆ. ಆ ವಿಷಯವನ್ನು ತಿಳಿಸುವುದಕ್ಕೆ ಮೇಲಿನ ವಾಕ್ಯವನ್ನು ಹೇಳಿದ್ದಾರೆ.

**ನೀನು ಯಾವ ಮತವನ್ನು ಸಮರ್ಥಿಸಬೇಡ, ಮತವನ್ನು ಮನುಷ್ಯನೇ ಸೃಷ್ಠಿಸಿದ್ದಾನೆ. ನೀನು ದೇವರ ಜ್ಞಾನವನ್ನು ಮಾತ್ರ ಸಮರ್ಥಿಸು, ಜ್ಞಾನವನ್ನು ದೇವರು ಸೃಷ್ಠಿಸಿದ್ದಾನೆ.**

## 47. ನಿನಗೆ ಮೂತಿಗೆ ಮೀಸೆಗಳಿದ್ದರೆ, ನನಗೆ ಮುಂಗೈಯಿಗೆ ಕೂದಲುಗಳಿವೆಯೆಂದಳಂತೆ-ಯಾರು?

ಈ ಒಗಟನ್ನು ನೋಡಿದರೆ ಒಬ್ಬ ಪುರುಷನೊಂದಿಗೆ ಮತ್ತೊಬ್ಬ ಸ್ತ್ರೀ ಮಾತನಾಡಿದಂತೆ ಅರ್ಥವಾಗುತ್ತಿದೆ. ನಾನು ಹೆಂಗಸಾದರೂ ನಿನಗಿಂತ ನಾನು ಏನು ಕಡಿಮೆಯಿಲ್ಲ ಎಂದು ಗಂಡಸಿಗೆ ಸವಾಲು ಹಾಕಿದಂತೆ ಪ್ರಪಂಚರೀತಿಯಲ್ಲಿ ಪುರುಷರಿಗಿಂತ ಸ್ತ್ರೀಯರಾದ ನಾವು ಏನು ಕಡಿಮೆಯಿಲ್ಲ ಎನ್ನುವ ಸಂದರ್ಭದಲ್ಲಿ ಮೇಲಿನ ವಾಕ್ಯವನ್ನು ಹೇಳಿದಂತೆ ತಿಳಿಯುತ್ತಿದೆ. ಯಾವುದು ಏನಾದರೂ ಆಧ್ಯಾತ್ಮಿಕ ರೀತಿಯಲ್ಲಿ ಇದರ ಭಾವವೇನು ಎಂದು ನೋಡಿದರೆ ಮೀಸೆಗಳು, ಕೂದಲು ಎರಡೂ ಆತ್ಮಗೆ ಗುರುತಾಗಿರುವವೇ. ಕೂದಲು ಶರೀರದಲ್ಲಿ ಬೆಳೆದ ಸ್ಥಾನವನ್ನನುಸರಿಸಿ ಒಂದೊಂದುಕಡೆ ಒಂದೊಂದು ಹೆಸರಿನಿಂದ ಕರೆಯುತ್ತಿದ್ದಾರೆ. ಮೇಲಿನ ತುಟಿಯ ಮೇಲಿರುವವು ಮೀಸೆಗಳೆಂದು ಮುಂಗೈಯಿಗೆ ಇರುವವು ಕೂದಲೆಂದು ಹೇಳಿದರೂ ಎಲ್ಲಾ ಕೂದಲೇ ಆಗುತ್ತವೆ. ಕೂಡ ಎನ್ನುವ ಶಬ್ದದಿಂದ ಹುಟ್ಟಿರುವುದು ಕೂದಲು. (ದೇಶ ಭಾಷೆಯಲ್ಲಿ ತೆಲುಗು ಲೇಸು ಎಂದರೇ ದೇವರಿಗೆ ಇಷ್ಟವಾದ ಆಧ್ಯಾತ್ಮಿಕದಲ್ಲಿ ತೆಲುಗು ಭಾಷೆಯಿಂದಲೇ ದೇವರ ಜ್ಞಾನಕ್ಕೆ ಪ್ರತಿಯೊಂದು ಪದಕ್ಕು ಹತ್ತಿರವಾಗಿ ಅರ್ಥವನ್ನು ಹೊಂದಿದೆ.) ಪೂರ್ವದಿಂದ ಕೂಡ ಎನ್ನುವ ಹೆಸರಿನಿಂದ ಕರೆಯಲ್ಪಡುತ್ತಿತ್ತು. ನಂತರ 'ಕೂಡಲು'ನಿಂದ 'ಕೂದಲು' ಎನ್ನುವ ಹೆಸರಾಗಿ ಬದಲಾಗಿಹೋಗಿದೆ. ಕೂದಲು ಆತ್ಮಗೆ ಗುರುತಾಗಿದೆ. ಆತ್ಮಜ್ಞಾನ ತಿಳಿದವನು ಕೂದಲನ್ನು ನೋಡಿದರೆ ಆತ್ಮವನ್ನು ಗುರುತು ಮಾಡಿಕೊಳ್ಳುತ್ತಾನೆ. ಜೀವಿಗೆ ಶಾಶ್ವತವಾಗಿ ಕೂಡಾ (ಜೊತೆ) ಇರುವುದು

ಆತ್ಮ. ಆದ್ದರಿಂದ "ಕೂಡ" ಎನ್ನುವ ಪದವನ್ನು ಆತ್ಮಗೆ ಗುರುತಾಗಿಡುವುದು ನಡೆದಿದೆ. ನಂತರ ಪದ್ಯ ಗದ್ಯಗಳಲ್ಲಿ ಬರೆಯುವವರು ಅವರಿಗೆ ಪದ ಸರಿಹೋಗುವಂತೆ "ಕೂಡಲು" ಎನ್ನುವ ಪದವಾಗಿ ಬದಲಿಸಿಕೊಂಡು ಕೊನೆಗದು "ಕೊದಲು" ಆಗಿದೆ. 'ಆತ್ಮ' ಎನ್ನುವ ಪದ ಗಿಡದಲ್ಲಿನ ಎನ್ನಲಾಗಿದೆ. ಆತ್ಮ ಎನ್ನುವುದು ಕಾಣಿಸುವುದಲ್ಲ. ಆದ್ದರಿಂದ ಅದಕ್ಕೆ ಗುರುತಾಗಿ ಗಿಡಕ್ಕೆ ಸ್ವಲ್ಪ ಬದಲಾವಣೆಯಿಂದ ಎಲೆ ಎಂದರೂ ಮನುಷ್ಯನತ್ತಿರ ಕೂಡಾ ಸ್ವಲ್ಪ ಬದಲಾವಣೆಯಿಂದ ಹೇಳಲ್ಪಟ್ಟರೂ ಕೊನೆಗೆ ಮೀಸೆಗಳನ್ನು ಕೂದಲೆಂದು ಹೇಳಲ್ಪಟ್ಟಿವೆ.

ಆತ್ಮ ಶರೀರದಲ್ಲಿದ್ದು ಸರ್ವ ಕಾರ್ಯಗಳನ್ನು ಮಾಡಿಸುತ್ತಾ ಇದೆ. ಮತ್ತು ಮಾಡುತ್ತಿದೆ. ಶರೀರದೊಳಗೆ ಆತ್ಮ ಏನು ಮಾಡುತ್ತಿರುವುದು ಹೊರಗೆ ಗೊತ್ತಿಲ್ಲ. ಆದ್ದರಿಂದ  ಹೊರಗೆ ಕೂಡಾ ತಿಳಿಯುವಂತೆ ಕೆಲಸಗಳು ಮಾಡುವ ಅವಯವಗಳ ಹತ್ತಿರ ಆತ್ಮಗೆ ಗುರುತಾದ ಕೂದಲುಗಳಿರುವಂತೆ ದೇವರು ಮಾಡಿದ್ದಾನೆ. ಶರೀರದ ಹೊರಗೆ ಕೆಲಸಗಳು ಮಾಡುವವು ಕರ್ಮೇಂದ್ರಿಯಗಳಾದ ಕಾಲು, ಕೈಗಳು, ಬಾಯಿ, ಎಲ್ಲರಿಗೂ ಹೊರಗೆ ಕಾಣಿಸುವಂತೆ ಇವೆ. ಮಾಡುವ ಕೆಲಸ ಮಾಡುತ್ತಿದ್ದರೂ ಅದು ಸ್ವತಃವಾಗಿ ಕೆಲಸ ಮಾಡುತ್ತಿಲ್ಲ. ಅದನ್ನು ಆತ್ಮ ತನ್ನಶಕ್ತಿಯಿಂದ ಕದಲಿಸಿ ಕೆಲಸ ಮಾಡಿಸುತ್ತಿದೆಯೆಂದು ಕೈ ಕೆಲಸಮಾಡುವುದಕ್ಕೆ ಕಾರಣ ಮೂಲಶಕ್ತಿ ಆತ್ಮಯೆಂದು ತಿಳಿಯುವಂತೆ, ಕೈ ಪ್ರಾರಂಭವಾದ ಭುಜದ ಹತ್ತಿರ ಕಂಕುಳದಲ್ಲಿ  ಕೂದಲನ್ನು ಇರಿಸುವುದು ನಡೆದಿದೆ.  ಹಾಗೆ ಕೈ ಪ್ರಾರಂಭದಲ್ಲಿಯೇ ಭುಜದ ಕೆಳಗೆ ಆತ್ಮಗೆ ಗುರುತಾದ ಕೂದಲಿರುವುದರಿಂದ, ಆತ್ಮದಿಂದಲೇ ಕೈ ಮಾಡುತ್ತಿರುವ ಕೆಲಸಗಳು ನಡೆಯುತ್ತಿವೆಯೆಂದು ತಿಳಿಯುತ್ತಿದೆ. ಈ ವಿಧವಾಗಿ ಕೆಲಸ ಮಾಡುವ ಭಾಗ ಎಲ್ಲಿಯಾದರೂ ಶರೀರದ ಮೇಲೆ ಇದ್ದರೆ ಅಲ್ಲಿ ಕೂದಲು (ಆತ್ಮಶಕ್ತಿಗಳು) ಇರುತ್ತವೆ. ಕಂಕುಳದಲ್ಲಿ ಕೂದಲು ಯಾವ ಉಪಯೋಗ ಇಲ್ಲದಿರುವವಾಗಿ ಇದ್ದರೂ ಆತ್ಮವನ್ನು ಆತ್ಮಶಕ್ತಿಯನ್ನು ತಿಳಿಸುವ ಸಲುವಾಗಿಯೇ ಇವೆ. ಕಣ್ಣರೆಪ್ಪೆಗಳು ನಮಗೆ ತಿಳಿಯದಂತೆಯೇ ಕೆಲಸ ಮಾಡುತ್ತಿರುತ್ತವೆ. ಆತ್ಮವೇ ಕಣ್ಣರೆಪ್ಪೆಗಳನ್ನು ಮುಚ್ಚುವಂತೆ ತೆರೆಯುವಂತೆ

ಮಾಡುತ್ತಿದೆ. ಅಲ್ಲಿ ಮುಚ್ಚುವುದು ತೆರೆಯುವುದು ನಡೆಯುತ್ತಿದೆ ಆದ್ದರಿಂದ ಕಣ್ಣರೆಪ್ಪೆಗಳಿಗೆ ಕೂದಲಿವೆಯೆಂದು ಹೇಳಬಹುದು. ಹಾಗೆ ಕೂದಲಿರುವುದರಿಂದ ಆ ಕೆಲಸವನ್ನು ಆತ್ಮ ಮಾಡುತ್ತಿದೆಯೆಂದು ಆತ್ಮಜ್ಞಾನ ತಿಳಿದವರು ಗ್ರಹಿಸಬಲ್ಲರು. ಆತ್ಮಜ್ಞಾನ ಇಲ್ಲದವರಿಗೆ ಈ ವಿಷಯವನ್ನು ಹೇಳಿದರೂ, ಕಾಣಿಸುವ ದೃಶ್ಯವಾದ್ದರಿಂದ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರು.

ಮೂತಿಗೆ ಮೀಸೆಗಳಿವೆಯೆಂದರೇ ಅಲ್ಲಿರುವ ಬಾಯಿ ಕದಲಿ ಕೆಲಸ ಮಾಡುತ್ತಿದೆಯೆಂದು ತುಟಿಗಳು ಕದಲಿ ಬಾಯಿ ಅಲುಗಾಡಿ ಕೆಲಸ ಮಾಡುವುದಕ್ಕೆ ಆತ್ಮಶಕ್ತಿಯೇ ಕಾರಣವೆಂದು ತಿಳಿದುಹೋಗುತ್ತಿದೆ. ಅಷ್ಟಕ್ಕೂ ಅಲ್ಲಿ ನಡೆಯುವ ಕೆಲಸವೇನು ಎಂದು ನೋಡಿದರೆ ಮುಖ್ಯವಾದ ಕೆಲಸ ಮಾತನಾಡುವುದೇಯೆಂದು ತಿಳಿಯುತ್ತಿದೆ. ಬಾಯಿ ಮಾತನಾಡುವುದಾದರೆ, ಕೈ ಮಾಡುವುದು. ಮುಂಗೈಗೆ ಎಂದರೇ ಕೈಯಿ ಮುಂದೆ, ಕೈಯಿ ಪ್ರಾರಂಭವಾಗುವ ಭುಜದಬಳಿ ಎಂದು ಅರ್ಥ. ಆದರೇ ಇಲ್ಲಿ ಈ ಒಗಟು ಕಥೆಯಲ್ಲಿನ ಸಾರಾಂಶವೇನೆಂದರೇ ಮಾತನಾಡುವವನಿಗಿಂತ ಮಾಡುವವನು ದೊಡ್ಡವನೆಂದು ಹೇಳಿದಂತೆ ಇದೆ. ಮಾತುಗಳಿಗಿಂತ ಕೈಗಳು ಮೇಲು ಎನ್ನುವಂತೆ "ನಿನ್ನ ಮೂತಿಗೆ ಮೀಸೆಗಳಿದ್ದರೆ ನನ್ನ ಮುಂಗೈಗೆ ಕೂದಲಿವೆಯೆಂದು" ಹೇಳುವುದು ನಡೆದಿದೆ. ಈ ವಾಕ್ಯದಿಂದ ನೀನು ಮಾತನಾಡುವವನೇ ನಾನು ಮಾಡಿ ತೋರಿಸುವವನೆಂದು ಹೇಳಿದಂತಿದೆ. ಬೊಗಳುವ ನಾಯಿ ಕಚ್ಚುವುದಿಲ್ಲ, ಕಚ್ಚುವ ನಾಯಿ ಬೊಗಳುವುದಿಲ್ಲ ಎನ್ನುವಂತೆ ಮಾತನಾಡುವವನು ಕೆಲಸಮಾಡುವುದಿಲ್ಲ, ಕೆಲಸ ಮಾಡುವವನು ಮಾತನಾಡುವುದಿಲ್ಲ. ಮೂತಿಗೆ ಮೀಸೆಗಳಿರುವವನು ಮಾತನಾಡುವವನಿಗೆ ಗುರುತಾಗಿ, ಮುಂಗೈಯಿಗೆ ಕೂದಲಿರುವವನು ಕೆಲಸಮಾಡುವವನಿಗೆ ಗುರುತಾಗಿ ಈ ವಾಕ್ಯ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು.

**ಮತ ಮನುಷ್ಯರ ಗುಂಪನ್ನು ಬೆಳೆಸುತ್ತದೆ. ಜ್ಞಾನ ಕೇವಲ ಜ್ಞಾನಿಗಳ ಗುಂಪನ್ನು ಬೆಳೆಸುತ್ತದೆ.**

## 48. ಕಷ್ಟಗಳು ಮನುಷ್ಯರಿಗೆ ಅಲ್ಲದೆ, ಮರಕ್ಕೆ ಬರುತ್ತವಾ?

ಮಾನವಜನ್ಮ ಎಷ್ಟೋ ದೊಡ್ಡದೆಂದು, ಎಷ್ಟೋ ಜನ್ಮಗಳ ಪುಣ್ಯಫಲದಿಂದ ಮಾನವಜನ್ಮ ಲಭಿಸುತ್ತದೆಂದು ಬಹಳಜನ ಹೇಳುತ್ತಿರುವಾಗ, ಕೆಲವರು ತಮ್ಮ ಉಪನ್ಯಾಸಗಳಲ್ಲಿ ಹೇಳುತ್ತಿರುವಾಗ ಕೇಳಿದ್ದೇವೆ. ಪಾಪ ಮಾಡಿದವರು ಪಶು, ಪಕ್ಷಿ, ವೃಕ್ಷ ಲತಾಧಿಗಳಾಗಿ ಹುಟ್ಟುತ್ತಾರೆಂದು, ಮಾನವಜನ್ಮ ದೊಡ್ಡ ಪುಣ್ಯದಿಂದ ಲಭಿಸಿದೆಯೆಂದು ಕೆಲವರು ಸನ್ಯಾಸಿಗಳು ಹೇಳಿದಾಗ ಕೇಳಿದ್ದೇನೆ. ಇಷ್ಟುಜನ ದೊಡ್ಡವರೆಂದು ಹೆಸರುವಾಸಿಯಾದವರು ಮಾನವಜನ್ಮ ಬಹಳ ಅಪರೂಪವಾಗಿ ಲಭಿಸುವ ಜನ್ಮಯೆಂದು ಹೇಳಿರುವುದನ್ನು ನೋಡಿದ ನಂತರ ಅವರ ಮಾತನ್ನು ಯಾರೂ ಅಲ್ಲಗಳೆಯುವುದಿಲ್ಲ. ಎಷ್ಟೋ ತಿಳಿದವರು ಹೇಳುವುದು ನಿಜವೇ ಎಂದು ನಂಬಬೇಕಾಗಿದ್ದೆ. ಅಷ್ಟೇಅಲ್ಲದೆ ಮನುಷ್ಯನ ಜನ್ಮ ಎಲ್ಲಾ ಜನ್ಮಗಳಿಗಿಂತ ಎಷ್ಟೋ ತಿಳುವಳಿಕೆಯುಳ್ಳ ಜನ್ಮವಾಗಿ ಕಾಣಿಸುವುದರಿಂದ, ಉಳಿದ ಬುದ್ಧಿ ಬಲವಿಲ್ಲದ ಜನ್ಮಗಳಿಗಿಂತ, ಬುದ್ಧಿಬಲವಿರುವ ಮಾನವ ಜನ್ಮವೇ ಶ್ರೇಷ್ಠವಾದುದೆಂದು ನಂಬದೆ ತಪ್ಪುವುದಿಲ್ಲ. ಪ್ರತ್ಯಕ್ಷವಾಗಿ ಕಾಣಿಸುವ ಬುದ್ಧಿ ಬಲವನ್ನನುಸರಿಸಿ, ಎಷ್ಟೋಜನ ಜ್ಞಾನಿಗಳೆನ್ನುವವರು ಹೇಳುವುದನ್ನನು ಸರಿಸಿ, ಪುರಾಣಗಳಲ್ಲಿ ಬರೆದ ಕಥೆಗಳನ್ನನುಸರಿಸಿ, ಎಲ್ಲಾ ಜನ್ಮಗಳಿಗಿಂತ ಮಾನವಜನ್ಮ ದೊಡ್ಡದೆಂದು ಅಂದುಕೊಳ್ಳುವುದು ನಡೆದರೂ, ಅಸತ್ಯವನ್ನು ಸಾವಿರಜನ ಸತ್ಯವೆಂದು ಹೇಳಿದರೂ, ಅದು ಸತ್ಯವಲ್ಲ ಎನ್ನುವಂತೆ, ಮಾನವ ಜನ್ಮವನ್ನು ದೊಡ್ಡದೆಂದು ಎಷ್ಟು ಜನ ಹೇಳಿದರೂ ಅದು ಅಸತ್ಯ ಆದ್ದರಿಂದ ಸತ್ಯ ಆಗಲಾರದು. ಮಾನವಜನ್ಮ ಉಳಿದ ಜನ್ಮಗಳಿಗಿಂತ ದೊಡ್ಡದಲ್ಲ ಎನ್ನುವಮಾತು ಕೆಲವರಿಗೆ ವಿಚಿತ್ರವಾಗಿ ತೋಚಿದರೂ, ಮಾನವಜನ್ಮ ಹೆಚ್ಚಾಗಿ ಪಾಪ ಮಾಡಿದವರಿಗೆ ಬರುತ್ತದೆನ್ನುವ ನಮ್ಮ ಮಾತು ಪೂರ್ತಿ ಸತ್ಯ.

ಜೀವರಾಶಿಗಳ ಸೃಷ್ಠಿ ಅಂಡಜ, ಪಿಂಡಜ, ಉದ್ಭಿಜಗಳೆಂದು ಮೂರು ವಿಧಗಳಾಗಿ ಇದ್ದರೂ, ಅವುಗಳ ಜನ್ಮಗಳನ್ನು ಉತ್ತಮರೆಂದು, ಅಧಮರೆಂದು, ಅಧಮಾಧಮರೆಂದು ಮೂರು ವಿಧಗಳಾಗಿ ಜೀವಿಗಳನ್ನು ಗುರುತಿಸಬಹುದು. ಜೀವರಾಶಿಗಳ ಸೃಷ್ಠಿ ಒಂದು ಮೊಟ್ಟೆಯಿಂದ ಹುಟ್ಟುವವು, ಎರಡು ಪಿಂಡ

(ಗರ್ಭದಿಂದ) ಹುಟ್ಟುವವು, ಮೂರು ಬೀಜದಿಂದ ಹುಟ್ಟುವವೆಂದು ಮೂರು ವಿಧಗಳಾಗಿವೆ. ಹಾಗೆ ಹುಟ್ಟಿದವುಗಳಲ್ಲಿ ಹೆಚ್ಚಾಗಿ ಪಾಪ ಮಾಡಿದ ಜೀವಿಗಳು ಕಡಿಮೆ ಪಾಪ ಮಾಡಿದ ಜೀವಿಗಳು ಮಧ್ಯ ರೀತಿಯಲ್ಲಿ ಪಾಪ ಮಾಡಿದ ಜೀವಿಗಳೆಂದು ಮೂರು ವಿಧಗಳಾಗಿ ವಿಭಜಿಸಬಹುದು. ಹೆಚ್ಚಾಗಿ ಪಾಪ ಮಾಡಿಕೊಂಡ ಜೀವಿಗಳು ಹುಟ್ಟಿದ ನಂತರ ಕೆಳಮುಖವಾಗಿ ಬೆಳೆಯುತ್ತಿವೆ, ಮಧ್ಯರೀತಿಯ ಪಾಪ ಸಂಪಾದಿಸಿಕೊಂಡ ಜೀವರಾಶಿಗಳು ಹುಟ್ಟಿದ ನಂತರ ಅಡ್ಡವಾಗಿ ಬೆಳೆಯುತ್ತಿವೆ. ಉತ್ತಮವಾದ ಜಾತಿಯಾಗಿದ್ದು ಕಡಿಮೆ ಪಾಪಹೊಂದಿ ಹುಟ್ಟಿದ ಜೀವರಾಶಿಗಳು ಮೇಲ್ಮುಖವಾಗಿ ಬೆಳೆಯುತ್ತಿವೆ. ಉತ್ತಮವಾದ ಜನ್ಮವಾಗಿದ್ದು ಮೇಲಕ್ಕೆ ಬೆಳೆಯುವವು ಗಿಡಗಳು, ಬಳ್ಳಿಗಳು ಮೊದಲಾದ ಉದ್ಭಿಜಗಳೆಂದು ತಿಳಿಯುತ್ತಿದೆ. ಅಡ್ಡವಾಗಿ ಬೆಳೆಯುವವು ಪಕ್ಷಿಗಳು, ಪ್ರಾಣಿಗಳೆಂದು ತಿಳಿಯುತ್ತಿದೆ. ಇವುಗಳಲ್ಲಿ ಅಂಡಜಗಳು, ಪಿಂಡಜಗಳು ಎರಡು ಇವೆ. ಇನ್ನು ಕೆಳಗೆ ಬೆಳೆಯುವವು ಒಂದೇವೊಂದು ಜಾತಿ ಇದೆ. ಅದೇ ಮಾನವಜಾತಿ. ಮಾನವಜಾತಿ ಪಿಂಡಜವೆಂದು ಮರೆಯಬಾರದು. ಪಿಂಡಜ ಜಾತಿಯಲ್ಲಿ ಎಷ್ಟೋ ಪ್ರಾಣಿಗಳಿದ್ದರೂ ಒಂದು ಕೂಡಾ ಮಾನವನಂತೆ ಕೆಳಮುಖವಾಗಿ ಬೆಳೆಯಲಿಲ್ಲ.

ಉಳಿದ ಜೀವರಾಶಿಗಳಿಗಿಂತ ಮನುಷ್ಯನಿಗೆ ಬುದ್ಧಿಬಲ ಹೆಚ್ಚಾಗಿರುವುದರಿಂದ, ಉಳಿದವುಗಳಿಗಿಂತ ನನಗೆ ಬುದ್ಧಿ ಹೆಚ್ಚಾಗಿದೆ ಎಂದು ಮನುಷ್ಯ ತನ್ನನ್ನು ತಾನು ಮೋಸಮಾಡಿಕೊಳ್ಳುತ್ತಿದ್ದಾನೆ. ಬುದ್ಧಿಬಲ ಇರುವುದರಿಂದ ಲಾಭವಾ, ನಷ್ಟವಾ ಎಂದು ಯೋಚಿಸದೆ, ಮೇಲ್ನೋಟಕ್ಕೆ ಕಾಣಿಸುವುದನ್ನನುಸರಿಸಿ ನಾನೇ ದೊಡ್ಡವನು ಎಂದುಕೊಳ್ಳುವುದು ಸ್ವತಃವಾಗಿ ನಿನ್ನನ್ನು ನೀನು ಮೋಸಮಾಡಿಕೊಂಡಂತೆ. ಪಕ್ಕದವರಿಗೆಲ್ಲ ಚಿಕ್ಕಕಲ್ಲುಗಳು ದೊರೆತಿವೆ. ನನಗೆ ದೊಡ್ಡ ಕುಂಬಳಕಾಯಿ ದೊರೆತಿದೆ ಎಂದು ಸಂತೋಷಪಟ್ಟಂತಿರುತ್ತದೆ. ಪಕ್ಕದವನಿಗೆ ಸಿಕ್ಕಿದ್ದು ಚಿಕ್ಕಕಲ್ಲಾದರೂ ಅದು ಎಷ್ಟೋ ಬೆಲೆಯುಳ್ಳದ್ದು. ನನಗೆ ದೊರೆತ ಕುಂಬಳಕಾಯಿ ನೋಡುವುದಕ್ಕೆ ದೊಡ್ಡದಾದರೂ ಚಿಕ್ಕಕಲ್ಲಿಗಿಂತ ಬೆಲೆ ಕಡಿಮೆಯಾದುದು ಎಂದು ಮನುಷ್ಯ ಯೋಚಿಸಲಾರದೆ ಹೋಗುತ್ತಿದ್ದಾನೆ. ಬುದ್ಧಿಬಲದಿಂದ ಮೇಲ್ನೋಟಕ್ಕೆ ಕಾಣಿಸುವುದಕ್ಕೆ ಇತರೆ ಪ್ರಾಣಿಗಳ ಮೇಲೆ ದೊಡ್ಡಸ್ತಿಕೆ ಚೆಲಾಯಿಸಿದರೂ ಅವುಗಳಿಗಿಂತ ಹೆಚ್ಚಿನ ಜಾಣ್ಮೆಯಿಂದ ಅವುಗಳನ್ನು

ಬಂಧಿಸಲ್ಪಟ್ಟರೂ, ಬುದ್ಧಿ ಇರುವುದರಿಂದ ನಮಗೆ ಏನು ಲಾಭ? ಬುದ್ಧಿಯಿಲ್ಲದಿರುವುದರಿಂದ ಅವುಗಳಿಗೇನು ನಷ್ಟ? ಎಂದು ಮನುಷ್ಯ ತಿಳಿಯಲಾರದೆ ತಾನೇ ದೊಡ್ಡವನು ಎಂದುಕೊಳ್ಳುತ್ತಿದ್ದಾನೆ. ಬುದ್ಧಿ ಇರುವುದರಿಂದ ತನಗೇ ಅನುಭವಗಳು ಹೆಚ್ಚು ಎಂದು, ಅವುಗಳಿಗಿಂತ ಹೆಚ್ಚಾಗಿ ಅನುಭವಿಸುವವನೆಂದು ತಿಳಿಯಲಾರದೆಹೋಗಿದ್ದಾನೆ. ಅಡ್ಡ ಬೆಳೆಯುವ ಪ್ರಾಣಿಗಳು, ಪಕ್ಷಿಗಳಿಗಿಂತ ಕೆಳಮುಖವಾಗಿ ಬೆಳೆಯುವ ಮನುಷ್ಯ ಅವುಗಳಿಗಿಂತ ಕಡಿಮೆ ಮಟ್ಟದವನೆಂದು ಸ್ವಲ್ಪವಾದರೂ ಗುರುತಿಸಲಾರದೆ ಹೋಗಿದ್ದಾನೆ. ಕೆಳಕ್ಕೆ ಬೆಳೆಯುವ ಮನುಷ್ಯನಿಗಿಂತ ಅಡ್ಡ ಬೆಳೆಯುವ ಜೀವರಾಶಿಗಳು ಕರ್ಮವನ್ನು ಕಡಿಮೆ ಅನುಭವಿಸುತ್ತಿರುವಾಗ ಅಡ್ಡ ಬೆಳೆಯುವ ಪಕ್ಷಿಗಳು ಪ್ರಾಣಿಗಳಿಗಿಂತ ಮೇಲಕ್ಕೆ ಬೆಳೆಯುವ ಗಿಡಗಳು, ಬಳ್ಳಿಗಳು ಮೊದಲಾದ ಉದ್ಭಿಜಗಳು ಕಡಿಮೆ ಕರ್ಮವನ್ನು ಅನುಭವಿಸುತ್ತಿವೆ. ಕರ್ಮ ಅನುಭವಗಳನ್ನನುಸರಿಸಿ ದೇವರು ಜೀವರಾಶಿಗಳನ್ನು ಮೂರು ವಿಧಗಳಾಗಿ ಬೆಳೆಯುವಂತೆ ಮಾಡಿದ್ದಾನೆ. ಅಂಡಜ ಪಿಂಡಜಗಳೆಲ್ಲವನ್ನು ಅಡ್ಡವಾಗಿ ಬೆಳೆಯುವಂತೆ ಮಾಡಿದ ದೇವರು, ಒಬ್ಬನೇ ಒಬ್ಬ ಮನುಷ್ಯ ಪಿಂಡಜವಾದರೂ ಅವನನ್ನು ಮಾತ್ರ ಕೆಳಕ್ಕೆ ಬೆಳೆಯುವಂತೆ ಮಾಡಿದ್ದಾನೆ. ಅದರಿಂದ ಮನುಷ್ಯ ಆದವನು ದೇವರಿಗೆ ದೂರವಾಗಿ ಹೋಗುವುದಲ್ಲದೆ ನೀಚಸ್ಥಿತಿಗೆ ಇಳಿಜಾರಿಹೋಗುತ್ತಿದ್ದಾನೆಂದು ತಿಳಿಯುತ್ತಿದೆ. ಅಂಡಜ, ಪಿಂಡಜಗಳಲ್ಲಿ ತಾನು ಒಬ್ಬನು ಆದರೂ ಏಕೆ ಕೆಳಗೆ ಬೆಳೆಯಬೇಕಾಗಿ ಬಂದಿದೆಯೆಂದು ತನ್ನನ್ನು ಕುರಿತು ತಾನು ಎಂದೂ ಆಲೋಚಿಸಲಿಲ್ಲ. ಅಂಡಜ ಪಿಂಡಜಗಳಲ್ಲಿ ಕೆಲವು ಲಕ್ಷಗಳ ಜಾತಿಗಳಿದ್ದರೂ, ಮಾನವಜಾತಿ ಒಂದು ಮಾತ್ರ ಅವುಗಳಿಂದ ಬಹಿಷ್ಕರಿಸಲ್ಪಟ್ಟಿದೆಯೆಂದು ಯಾವಕಾರಣಕ್ಕೂ ಗಮನಿಸಲಿಲ್ಲ. ಕಾಣಿಸುವಂತೆ ಪ್ರತ್ಯಕ್ಷವಾಗಿ ಉದ್ಭಿಜಗಳಾದ ವೃಕ್ಷ, ಲತಾದಿಗಳು ಮೇಲ್ಮುಖವಾಗಿ ಬೆಳೆಯುತ್ತಿರುವುದನ್ನು ನೋಡಿ ಅಂಡಜ, ಪಿಂಡಜಗಳಿಗಿಂತ ವಿಭಿನ್ನವಾಗಿ ಉದ್ಭಿಜಗಳು ಮಾತ್ರ ಏಕೆ ಮೇಲಕ್ಕೆ ಬೆಳೆಯುತ್ತಿವೆಯೆಂದು ಸ್ವಲ್ಪವಾದರೂ ಯೋಚಿಸಲಿಲ್ಲ. ತನಗೆ ಬುದ್ಧಿ ಹೆಚ್ಚು ಎನ್ನುವ ಮತ್ತಿನಲ್ಲಿ ಮುಳುಗಿಹೋದ ಮನುಷ್ಯ ತಾನು ಒಬ್ಬ ಜೀವಿಯೆಂದು ಕೂಡಾ ಗುರುತು ಇಲ್ಲದಂತೆ ಹೋದಾಗ ಉಳಿದವುಗಳನ್ನು ಕುರಿತು ಹೇಗೆ ಯೋಚಿಸುತ್ತಾನೆ.

ಮನುಷ್ಯನಿಗೆ ತಿಳಿದರೂ ತಿಳಿಯದಿದ್ದರೂ ಮನುಷ್ಯನಿಗಿಂತ ಕರ್ಮದಲ್ಲಿ ಕಡಿಮೆ ಅನುಭವ ಇರುವವು ಅಂಡಜ, ಪಿಂಡಜಗಳಾದ ಪಶು, ಪಕ್ಷಿಗಳಾಗಿದ್ದು ಅವುಗಳಿಗಿಂತ ಕಡಿಮೆ ಅನುಭವ ಇರುವವು ಉದ್ಭಿಜಗಳು. ಉದಾಹರಣೆಗೆ ಮನುಷ್ಯನಿಗೆ ಒಂದು ಕೈಬೆರಳನ್ನು ಚಾಕುವಿನಿಂದ ಕತ್ತರಿಸಿದರೆ ಎಷ್ಟು ಬಾಧೆ ಇರುತ್ತದೊ ಅದರಲ್ಲಿ ಹತ್ತು ಭಾಗ ಮಾತ್ರ ಪಶುಗಳಿಗೆ ಕಾಲನ್ನು ಕತ್ತರಿಸಿದಾಗ ಇರುತ್ತದೆ. ಪಶುವಿಗಿರುವ ನೋವಿನಲ್ಲಿ ಹತ್ತನೆ ಭಾಗ ಮಾತ್ರವೇ ಗಿಡದಕೊಂಬೆ ಯನ್ನು ಕತ್ತರಿಸಿದಾಗ ಗಿಡಕ್ಕಿರುತ್ತದೆ. ಒಬ್ಬ ಮನುಷ್ಯನಿಗೆ ಶರೀರ ನೋವಾಗಲಿ ಮಾನಸಿಕ ಬಾಧೆಯಾಗಲಿ 100 ಭಾಗಗಳಿರುವಾಗ ಅದರಲ್ಲಿ ಪ್ರಾಣಿಗೆ ಮತ್ತು ಪಕ್ಷಿಗೆ 10 ಭಾಗಗಳು ಮಾತ್ರವೇ ಇರುತ್ತದೆ. ಕೊನೆಗೆ ಗಿಡಕ್ಕಾಗಲಿ ಬಳ್ಳಿಗಾಗಲಿ ಒಂದು ಭಾಗ ಮಾತ್ರ ಇರುತ್ತದೆ. ಕರ್ಮ ಅನುಭವದಲ್ಲಿ ಪ್ರಾಣಿಗಳಿಗೆ ವೃಕ್ಷಗಳಿಗೆ ಇರುವ ವ್ಯತ್ಯಾಸ ತಿಳಿದುಹೋಗಿದೆ ಅಲ್ಲವೆ! ಮನುಷ್ಯನಿಗೆ ಬುದ್ಧಿಯಿದ್ದು ಏನು ಪ್ರಯೋಜನವೊ ನೀವೇ ಯೋಚಿಸಿರಿ. ಬುದ್ಧಿ ಇರುವುದರಿಂದ ನಾನು ದೊಡ್ಡವನೆಂದು ಹೇಳಿಕೊಳ್ಳುವುದಕ್ಕೆ ಮಾತ್ರವೇ ಎಂದು ತಿಳಿಯುತ್ತಿದೆ. ದೇವರು ಮನುಷ್ಯನಿಗೆ ಬುದ್ಧಿಯನ್ನು ಕೊಟ್ಟು ಮನುಷ್ಯ ತನ್ನನ್ನು ತಾನು ಮೋಸ ಮಾಡಿಕೊಳ್ಳುವಂತೆ ಮಾಡಿದ್ದಾನೆ.

ಮನುಷ್ಯ ಕರ್ಮವನ್ನು ಅನುಭವಿಸುವುದರಲ್ಲಿ ಎಷ್ಟು ಸಾಂದ್ರತೆ ಹೊಂದಿದ್ದಾನೊ, ಕರ್ಮ ಸಂಪಾದಿಸಿಕೊಳ್ಳುವುದರಲ್ಲಿಯೂ ಅಷ್ಟೇ ಸಾಂದ್ರತೆ ಹೊಂದಿದ್ದಾನೆ. ಮನುಷ್ಯ ಪ್ರಾಣಿಗಿಂತ ಶೇ.90 ರಷ್ಟು ಹೆಚ್ಚು ಕರ್ಮವನ್ನು ಅನುಭವಿಸುತ್ತಿದ್ದಾನೆ. ಹಾಗೆಯೇ ಶೇ. 90 ರಷ್ಟು ಹೆಚ್ಚು ಕರ್ಮವನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ. ಪ್ರಾಣಿಗಳ ವಿಷಯಕ್ಕೆ ಬಂದರೇ ಮನುಷ್ಯನಿಗಿಂತ ಪ್ರಾಣಿ ಶೇ. ಹತ್ತ (10) ರಷ್ಟು ಮಾತ್ರ ಕರ್ಮವನ್ನು ಅನುಭವಿಸುವುದು, ಸಂಪಾದಿಸಿಕೊಳ್ಳುವುದು ನಡೆಯುತ್ತಿದೆ. ಗಿಡಗಳ ವಿಷಯಕ್ಕೆ ಬಂದರೇ ಪ್ರಾಣಿಯಲ್ಲಿ ಹತ್ತು ಭಾಗ, ಮನುಷ್ಯನಲ್ಲಿ ಒಂದು ಭಾಗದಷ್ಟು ಮಾತ್ರವೇ ಅನುಭವಿಸುವುದಾಗಲಿ, ಸಂಪಾದಿಸಿಕೊಳ್ಳುವುದಾಗಲಿ ನಡೆಯುತ್ತಿದೆ. ಈ ವಿಧವಾಗಿ ನೋಡಿದರೆ ಮನುಷ್ಯ ನೂರು ಕರ್ಮಗಳು ಅನುಭವಿಸಿದರೆ ಗಿಡ ಒಂದು ಕರ್ಮವನ್ನು ಮಾತ್ರ ಅನುಭವಿಸುತ್ತದೆಂದು ಲೆಕ್ಕಿಸಿಕೊಳ್ಳಬಹುದು. ಮನುಷ್ಯನಿಗೆ ತಿಳುವಳಿಕೆ

ಹೆಚ್ಚಾಗಿರುವುದರಿಂದ ಕರ್ಮವನ್ನು ಕೂಡಾ ಹೆಚ್ಚಾಗಿ ಅನುಭವಿಸುತ್ತಿದ್ದಾನೆ. ಈ ವಿಷಯವನ್ನು ತಿಳಿಯುವುದಕ್ಕೆ ಮೇಲಿನ ಒಗಟಿನಲ್ಲಿ "ಕಷ್ಟಗಳು ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತವಾ" ಎಂದು ಹೇಳಿದ್ದಾರೆ. ಹಾಗೆ ಹೇಳುವುದರಿಂದ ಮನುಷ್ಯ ಪಾಪ ಮಾಡಿದ್ದಾನೆ ಆದ್ದರಿಂದ ಕಷ್ಟಗಳು ಬರುತ್ತವೆ, ಮರ ಪಾಪ ಮಾಡಲಿಲ್ಲ ಆದ್ದರಿಂದ ಮರಕ್ಕೆ ಕಷ್ಟಗಳು ಬರಲಿಲ್ಲವೆಂದು ಅರ್ಥವಾಗುತ್ತಿದೆ. ಈಗ ತಿಳಿದಿದೆಯಾ! ಮಾನವಜನ್ಮ ಎಲ್ಲದಕ್ಕಿಂತ ಹೆಚ್ಚು ಪಾಪ ಮಾಡಿದೆಯೆಂದು ಸಂಪೂರ್ಣ ಜ್ಞಾನವನ್ನು ತಿಳಿದ ಹಿರಿಯರು ಪೂರ್ವದಲ್ಲಿ ಎಷ್ಟೋ ದೊಡ್ಡ ರಹಸ್ಯದಿಂದ ಕೂಡಿಕೊಂಡ ಜ್ಞಾನವನ್ನು ಒಗಟಿನ ರೂಪದಲ್ಲಿ ಹೇಳಿದ್ದಾರೆ. ಅದರಿಂದ ಮಾನವ ಜನ್ಮ ಹೆಚ್ಚು ಪಾಪ ಮಾಡಿಕೊಂಡವರಿಗೆ ಬರುತ್ತದೆಂದು ತಿಳಿದಿದೆ.

**ಮತವನ್ನು ಯಾವ ಮನುಷ್ಯನಲ್ಲಾದರೂ ನೋಡಬಹುದು. ಜ್ಞಾನವನ್ನು ಕೆಲವರಲ್ಲಿಯೇ ನೋಡುತ್ತೇವೆ.**

## 49. ಮನಸ್ಸಿಗೆ ಇಷ್ಟವಾದವನು ಗಂಡನಾಗಲಿ, ಮಂಗಳಸೂತ್ರ ಕಟ್ಟುವುದರಿಂದ ಗಂಡನಾಗುವುದಿಲ್ಲ.

'ಆಸಕ್ತಿ' ಎನ್ನುವಾತನು ದೈವಜ್ಞಾನದ ಮೇಲೆ ಆಸಕ್ತಿಹೊಂದಿ ಜ್ಞಾನ ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದನು. ಜ್ಞಾನ ತಿಳಿಯಬೇಕೆಂದರೇ ಗುರುವು ಇರಬೇಕೆಂದು, ಗುರು ಮುಖಾಂತರ ಉಪದೇಶ ತೆಗೆದುಕೊಳ್ಳಬೇಕೆಂದು ಕೆಲವರು ಹೇಳಿದಾಗ ಗುರುವಿಗಾಗಿ ಹುಡುಕುತ್ತಿದ್ದನು. ಅಷ್ಟರಲ್ಲಿ ಆ ಊರಿನೊಳಗೆ ಒಬ್ಬ ಗುರು ಬಂದಿದ್ದಾನೆ. ಆಗ ಆಸಕ್ತಿ ಎನ್ನುವವನಿಗೆ ಸಂತೋಷವಾಗಿ ಹುಡುಕಲು ಹೋದ ಬಳ್ಳಿ ಕಾಲಿಗೆ ತಗಲಿದಂತಾಗಿದೆ. ತಕ್ಷಣ ಗುರು ಹತ್ತಿರಕ್ಕೆ ಹೋಗಿ, ತನಗೆ ಜ್ಞಾನ ಬೇಕೆಂದು ಕೋರಿಕೊಂಡಿದ್ದಾನೆ. ಆಗ ಆ ಗುರುಗಳು ಮೊದಲು ಉಪದೇಶ ತೆಗೆದುಕೊಂಡು ತನಗೆ ಶಿಷ್ಯನಾಗೆಂದಿದ್ದಾನೆ. ಹಾಗೆಯೇ ಆ ದಿನ ರಾತ್ರಿಗೆ ದೊಡ್ಡ ಪೂಜಾಕಾರ್ಯಕ್ರಮವನ್ನಿಟ್ಟು ಆಸಕ್ತಿ ಗುರೋಪದೇಶವನ್ನು ತೆಗೆದುಕೊಂಡಿದ್ದಾನೆ. ಗುರುಗಳು ಒಂದು ಚಿಕ್ಕ ಮಂತ್ರವನ್ನು ಹೇಳಿ ಅದನ್ನೇ

ಜಪಿಸಿಕೊಳ್ಳಲು ಹೇಳಿದ್ದಾನೆ. ಅಷ್ಟೇ ಅಲ್ಲದೆ ಎಂದಿಗೂ ಗುರು ಹೇಳಿದಂತೆ ಕೇಳುತ್ತೇನೆಂದು, ಗುರುವಿಗೆ ವಿಧೇಯನಾಗಿ ಇರುತ್ತೇನೆಂದು, ಆಸಕ್ತಿ ಎನ್ನುವಾತನಿಂದ ಗುರುಗಳು ಪ್ರಮಾಣ ಮಾಡಿಸಿಕೊಂಡಿದ್ದಾನೆ. ಅಷ್ಟೇ ಆ ಗುರುಗಳು ಪುನಃ ವರ್ಷದವರೆಗು ಆ ಊರಿಗೆ ಬರಲಿಲ್ಲ. ಆಸಕ್ತಿ ಎನ್ನುವಾತನು ಗುರು ಹೇಳಿದ ಮಂತ್ರವನ್ನೇ ಧ್ಯಾನ ಮಾಡುತ್ತಾ ಕಾಲ ಕಳೆಯುತ್ತಿದ್ದನು. ವರ್ಷದ ನಂತರ ಗುರುಗಳು ಅಲ್ಲಿಗೆ ಬಂದು ಹಳೆ ಶಿಷ್ಯರೆಲ್ಲರನ್ನು ಮಾತನಾಡಿಸಿ, ಅವರಿಂದ ಪಾದಪೂಜೆಗಳು ಮಾಡಿಸಿಕೊಂಡು, ಕೆಲವು ಹೊಸಬರನ್ನು ಶಿಷ್ಯರನ್ನಾಗಿ ಸೇರಿಸಿಕೊಂಡು ಅವರಿಗೆ ಉಪದೇಶಕೊಟ್ಟುಹೋಗಿದ್ದಾನೆ. ಹೀಗೆ ಹತ್ತು ವರ್ಷಗಳು ಕಳೆದರೂ, ಗುರುಗಳು ಶಿಷ್ಯರಿಗೆ ಜ್ಞಾನವನ್ನು ಕುರಿತು ಏನೂ ಹೇಳಲಿಲ್ಲ. ವರ್ಷಕ್ಕೊಂದುಸಲ ಆ ಊರಿಗೆ ಬರುವುದು, ಪೂಜೆಗಳು ಮಾಡಿಸಿ ಕೊಳ್ಳುವುದು, ಭಜನೆಗಳು ಮಾಡುವುದೂ, ಹೊಸ ಶಿಷ್ಯರಿಗೆ ಉಪದೇಶಕೊಟ್ಟು ಈ ಊರಿನಲ್ಲಿ ನನಗಿಷ್ಟುಜನ ಶಿಷ್ಯರಿದ್ದಾರೆಂದು ಲೆಕ್ಕವಿಟ್ಟುಕೊಂಡು ಹೋಗುವುದು ಹೊರತು ಜ್ಞಾನವೇನೂ ಅವರಿಗೆ ತಿಳಿಯದಂತೆ ಹೋಗಿದೆ.

ಹೀಗೆ ಹತ್ತು ವರ್ಷಗಳು ಕಳೆದ ನಂತರ ಆಸಕ್ತಿ ಎನ್ನುವಾತನಿಗೆ ಆತನ ಸ್ನೇಹಿತನು ಒಂದು ಗ್ರಂಥವನ್ನು ಕೊಟ್ಟಿದ್ದಾನೆ. ಆ ಗ್ರಂಥವನ್ನು ಆಸಕ್ತಿ ಓದಿ ಅಲ್ಲಿಯವರೆಗು ತಿಳಿಯದ ಜ್ಞಾನವನ್ನು ಎಷ್ಟೋ ತಿಳಿದುಕೊಂಡಿದ್ದಾನೆ. ಆಗ ಆತನು ಆ ಗ್ರಂಥವನ್ನು ಬರೆದ ರಚನೆಕಾರನ ಹತ್ತಿರಕ್ಕೆ ಹೋಗಿ ಇಲ್ಲಿಯವರೆಗು ತಿಳಿಯದ ಜ್ಞಾನ ಈಗ ನಿಮ್ಮ ಗ್ರಂಥದ ಮೂಲಕ ತಿಳಿದಿದೆ. ನಾನು ಹತ್ತು ವರ್ಷಗಳಿಂದ ಗುರು ಹತ್ತಿರ ಮಂತ್ರವನ್ನು ಉಪದೇಶವಾಗಿ ಹೊಂದಿ ಧ್ಯಾನ ಮಾಡುತ್ತಿದ್ದೇನೆ. ನನಗೆ ಅದು ಸರಿಯಾದ ಮಾರ್ಗ ಅಲ್ಲವೆಂದು ತಿಳಿದಿದೆ. ಆ ಮಂತ್ರ ಧ್ಯಾನ ಬಿಟ್ಟುಹಾಕಬೇಕೆಂದುಕೊಂಡಿದ್ದೇನೆ. ಈಗ ಏನು ಧ್ಯಾನ ಮಾಡಬೇಕೆಂದು ಕೇಳಿದ್ದಾನೆ. ಆಗ ಆ ರಚನಕಾರ "ಮೊದಲು ನೀನು ಜ್ಞಾನ ತಿಳಿದುಕೊ ನಂತರ ಏನು ಮಾಡಬೇಕೆನ್ನುವುದು ನಿನಗೇ ಅರ್ಥವಾಗುತ್ತದೆ" ಎಂದನು. ನಂತರ ಆಸಕ್ತಿ ಮೊದಲ ಗುರುವನ್ನು ಬಿಟ್ಟು, ಗ್ರಂಥರಚನಕಾರ ಬರೆದ ಗ್ರಂಥಗಳನ್ನು ಓದುತ್ತಾ, ಸಂಪೂರ್ಣ ಜ್ಞಾನಿಯಾಗಿ ಬದಲಾಗಿ

ಹೋಗಿದ್ದಾನೆ. ಹಾಗೆ ಜ್ಞಾನಿಯಾಗಿ ಬದಲಾಗಿಹೋದ ನಂತರ ತನ್ನ ಊರಿನಲ್ಲಿನ ಗುರುಶಿಷ್ಯರಿಗು ಕೂಡಾ ಜ್ಞಾನವನ್ನು ತಿಳಿಸಿದಾಗ, ಅವರು ಕೂಡಾ ಆಸಕ್ತಿ ತಿಳಿಸಿದ ಜ್ಞಾನಕ್ಕೆ ಆಕರ್ಷಿತರಾಗಿ, ಎಲ್ಲರೂ ತಮ್ಮ ಮಂತ್ರ ಧ್ಯಾನವನ್ನು ಬಿಟ್ಟು, ಜ್ಞಾನವನ್ನು ತಿಳಿಯತೊಡಗಿದರು. ಅಷ್ಟರಲ್ಲಿ ಆ ಊರಿಗೆ ಗುರುಗಳು ಬಂದಿದ್ದಾರೆ. ಗುರುಗಳು ಬಂದರೂ ಆ ವರ್ಷ ಯಾರೂ ಗುರುಗಳ ಹತ್ತಿರಕ್ಕೆ ಹೋಗಲಿಲ್ಲ. ಪೂಜೆಗಳು, ಭಜನೆಗಳು, ಮಾಡಲಿಲ್ಲ. ಅದರಿಂದ ಗುರುಗಳಿಗೆ ಪೂರ್ತಿ ಸಮಾಚಾರವೆಲ್ಲಾ ಅರ್ಥವಾಗಿಹೋಗಿದೆ. ಅಲ್ಲಿಯವರೆಗು ಹಳೆಶಿಷ್ಯರೊಂದಿಗೆ ದಕ್ಷಿಣೆಗಳು ತೆಗೆದುಕೊಳ್ಳುವುದು, ಹೊಸ ಶಿಷ್ಯರನ್ನು ಸೇರಿಸಿಕೊಳ್ಳುವುದು ಮಾಡುತ್ತಿರುವ ಗುರುಗಳಿಗೆ, ಮಂತ್ರೋಪದೇಶವೆನ್ನುವ ವ್ಯಾಪಾರ ನಷ್ಟವಾಗಿದೆ. ಮಾಡುವುದೇನಿಲ್ಲದೆ ಸಲಹೆಗಾಗಿ ತನಗೆ ತಿಳಿದ ತ್ರೈತ ಸಿದ್ಧಾಂತ ಯೋಗಿ ಹತ್ತಿರಕ್ಕೆ ಹೋಗಿ ತನ್ನ ವಿಷಯವೆಲ್ಲಾ ಹೇಳಿಕೊಂಡಿದ್ದಾನೆ. “ಇಲ್ಲಿಯವರೆಗು ತನಗೆ ಶಿಷ್ಯರಾಗಿರುವವರೆಲ್ಲರೂ ಒಬ್ಬೊಬ್ಬರು ಇತರೆ ಗ್ರಂಥಗಳು ಓದಿ ಅವುಗಳಿಗೆ ಆಕರ್ಷಿತರಾಗಿ ಅಲ್ಲಿಗೇ ಹೋಗುತ್ತಿದ್ದಾರೆ. ನನ್ನ ಹತ್ತಿರ ಹತ್ತುವರ್ಷಗಳಿಂದಿರುವ ಶಿಷ್ಯರು ಕೂಡಾ ನನ್ನನ್ನು ನನ್ನ ಧ್ಯಾನವನ್ನು ಬಿಟ್ಟು ಹೋಗುವುದಲ್ಲದೇ, ಪಕ್ಕದವರನ್ನು ಕೂಡಾ ತನ್ನಹಿಂದೆ ತೆಗೆದುಕೊಂಡು ಹೋಗಿದ್ದಾರೆ. ಹೀಗಾದರೆ ಗುರುಗಳು, ಗುರು ಉಪದೇಶಗಳ ಸಂಪ್ರದಾಯ ಕಣ್ಮರೆಯಾಗಿ ಹೋಗುತ್ತದೆ. ಜ್ಞಾನಗ್ರಂಥಗಳು ಬರೆದ ರಚನೆಕಾರ ಧ್ಯಾನವೇ ಮಾಡಬೇಡವೆಂದು, ಕಾಲ ವೃಥಾ ಆಗುತ್ತದೆಂದು ಹೇಳಿದ್ದಾನಂತೆ. ಇಂತಹವರೆಲ್ಲ ಬಂದು ನಮ್ಮ ಸಂಸ್ಕೃತಿಯನ್ನು ಹಾಳು ಮಾಡುತ್ತಿದ್ದಾರೆ. ಹೀಗಾದರೆ ಗುರುಗಳೆಂದು ನಮ್ಮನ್ನು ಯಾರೂ ಲೆಕ್ಕಹಿಡುವುದಿಲ್ಲ. ಗುರೂಪದೇಶದಿಂದ ಕೆಲಸವೇ ಇಲ್ಲವೆನ್ನುತ್ತಾರೆ. ಇದಕ್ಕೆ ನೀವೇನಾದರೂ ಪರಿಷ್ಕಾರ ಹೇಳಬೇಕು” ಎಂದು ಕೇಳಿದ್ದಾನೆ.

ಆಗ ಆ ಗುರುಗಳ ಮಾತುಗಳನ್ನು ಕೇಳಿದ ತ್ರೈತಸಿದ್ಧಾಂತ ಯೋಗಿ ಹೀಗೆ ಹೇಳಿದ್ದಾನೆ. “ನೀನು ಹೇಳಿದಂತೆ ಹಿಂದೂಧರ್ಮರಕ್ಷಣೆ ಪರಿಷತ್‌ನವರು ನಮ್ಮ ಮತಸ್ಥರೆಲ್ಲರೂ ಇತರೆ ಮತದೊಳಗೆ, ಮುಖ್ಯವಾಗಿ ಕ್ರೈಸ್ತವ ಮತದೊಳಗೆ ಹೋಗುತ್ತಿದ್ದಾರೆ. ಹಿಂದೂಮತ ಕ್ಷೀಣದಶೆಗೆ ಬಂದಿದೆ. ನಾವು ಹಿಂದೂ ಮತವನ್ನು

ರಕ್ಷಿಸಿಕೊಳ್ಳಬೇಕೆಂದು ಎಷ್ಟು ಪ್ರಯತ್ನಿಸುತ್ತಿದ್ದರೂ, ಎಲ್ಲಿಯೋ ಒಂದುಕಡೆ ಯಾರೋ ಒಬ್ಬರು ಹಿಂದೂಗಳು ಕ್ರೈಸ್ತರಾಗಿ ಬದಲಾಗಿ ಹೋಗುತ್ತಿದ್ದಾರೆ. ಕ್ರೈಸ್ತರು ಅವರ ಮತವನ್ನು ವಿಸ್ತೃತವಾಗಿ ಪ್ರಚಾರ ಮಾಡುವುದರಿಂದ, ಕರಪತ್ರಗಳನ್ನು ಉಚಿತವಾಗಿ ಹಂಚುವುದರಿಂದ, ಮನೆಮನೆ ತಿರುಗಿ ಪ್ರಚಾರ ಮಾಡುವುದರಿಂದ ಅವರ ಮತ ಚೆನ್ನಾಗಿ ಪ್ರಚಾರವಾಗಿ ನಮ್ಮ ಮತ ಕರಗಿಹೋಗುತ್ತಿದೆ. ಹೀಗಾದರೇ ಹಿಂದೂಮತ ಭವಿಷ್ಯತ್ತಿನಲ್ಲಿ ಇಲ್ಲದೇ ಹೋಗುತ್ತ ದೆಂದು ತಿಳಿದು ನಾವು ಸ್ವಲ್ಪಜನ ಸಂಸ್ಥೆಗಳಾಗಿ, ಪರಿಷತ್‌ಗಳಾಗಿ, ಸಂಘಗಳಾಗಿ, ಸೇನೆಗಳಾಗಿ, ದಳಗಳಾಗಿ ಏರ್ಪಟ್ಟು ನಮ್ಮ ಮತವನ್ನು ರಕ್ಷಿಸಿಕೊಳ್ಳುವ ಕಾರ್ಯ ದಲ್ಲಿ ಇದ್ದೇವೆ. ಎಲ್ಲಿ ಕ್ರೈಸ್ಥವ ಬೋಧನೆಗಳು ನಡೆಸಬೇ ಕೆಂದು ನೋಡಿದರೂ ಅವುಗಳನ್ನು ನಾವು ತಡೆಯುತ್ತಿದ್ದೇವೆ. ಎಲ್ಲಿ ಅವರ ಮಾತುಕೇಳಿಸಿದರೂ ಅನ್ಯಮತಪ್ರಚಾರವೆನ್ನುವ ಹೆಸರಿನಿಂದ ಅವರನ್ನು ಎದರಿಸುತ್ತಿದ್ದೇವೆ. ಎಲ್ಲಿಯೂ ಪ್ರಚಾರ ಮಾಡದಂತೆ ನೋಡುತ್ತಿದ್ದೇವೆ" ಎಂದು ನನ್ನೊಂದಿಗೆ ಹೇಳಿದ್ದಾರೆ. ಅವರ ಮಾತುಗಳಿಗೆ, ನಿನ್ನ ಮಾತುಗಳಿಗೆ ಒಂದೇ ಹೋಲಿಕೆ ಕಾಣಿಸುತ್ತಿದೆ. ನೀನು ನಿನ್ನ ಶಿಷ್ಯರನ್ನು ಕುರಿತು ಹೇಳಿದ್ದೀಯ. ಅವರು ತಮ್ಮ ಮತವನ್ನು ಕುರಿತು ಹೇಳಿದ್ದಾರೆ. ನಿಮ್ಮ ಎರಡು ವಿಷಯಗಳಿಗೆ ಸುಮಾರು ಒಂದೇ ಸಮಾಧಾನ ಸರಿಹೋಗುತ್ತದೆ.

ನಿಮ್ಮ ವಿಷಯಗಳನ್ನು ಪಕ್ಕಕ್ಕಿಟ್ಟು ಮತ್ತೊಂದು ವಿಷಯವನ್ನು ಹೇಳುತ್ತೇನೆ ಕೇಳು. ಒಬ್ಬನಿಗೆ ಮದುವೆಯಾಗಿ ಕೆಲವು ವರ್ಷಗಳಾಗಿದೆ. ಆತನಿಗೆ ಇಬ್ಬರು ಪತ್ನಿಯರಿರುವಾಗ ಐದು ವರ್ಷಗಳು ಪತಿಯೊಂದಿಗೆ ಸಂಸಾರಮಾಡಿದ ದೊಡ್ಡಪತ್ನಿ ಪಕ್ಕದ ಬೀಧಿಯಲ್ಲಿರುವ ವ್ಯಕ್ತಿಯೊಂದಿಗೆ ಓಡಿಹೋಗಿದ್ದಾಳೆ. ಕಾರಣವೇನು ಎಂದು ನೋಡಿದರೆ ಐದು ವರ್ಷಗಳು ಪತಿಯಾಗಿರುವವನು ಸಮಯಕ್ಕೆ ಸ್ನಾನಮಾಡಿ, ಶುಭ್ರವಾಗಿದ್ದು, ಒಳ್ಳೆಯ ಬಟ್ಟೆಗಳು ಧರಿಸಿ, ತಲೆ ಬಾಚಿಕೊಂಡು ಅಂದವಾಗಿ ಕಾಣಿಸದಂತೆ, ನನ್ನ ಹೆಂಡತಿಯೇ ಅಲ್ವಾ! ತಾಳಿಕಟ್ಟಿದ್ದೇನೇಳು! ನನ್ನನ್ನು ಬಿಟ್ಟು ಎಲ್ಲಿಗೆ ಹೋಗುತ್ತಾಳೆಂದು ಅಂದುಕೊಂಡಿದ್ದಾನೆ. ಅದೇ ಪಕ್ಕದ ಬೀಧಿಯವನು ಯಾವ ಸಮಯಕ್ಕೆ ಹೇಗಿರಬೇಕೊ

ಹಾಗಿರುತ್ತಾ ಅಂದವಾಗಿ ಕಾಣಿಸುವುದರಿಂದ, ಸ್ವಲ್ಪದೂರದವರೆಗು ಸುವಾಸನೆ ಬರುವ ಸೆಂಟು ಎಣ್ಣೆಯನ್ನು ಬಳಿದುಕೊಳ್ಳುವುದರಿಂದ, ಅವನಬಗ್ಗೆ ಈತನ ಹೆಂಡತಿ ಆಕರ್ಷಿತಳಾಗಿ, ಅವೆಲ್ಲ ತನ್ನ ಪತಿಯಬಳಿ ಇಲ್ಲವೆಂದು, ಕನಿಷ್ಟ ಅಂದವಾದ ಬಟ್ಟೆಗಳನ್ನು ಕೂಡಾ ಹಾಕಿಕೊಳ್ಳುವುದಿಲ್ಲವೆಂದು, ಇಂತಹ ಪತಿ ಹತ್ತಿರ ಇರುವುದಕ್ಕಿಂತ ಇಷ್ಟವಿರುವ ಮತ್ತು ಮನಸ್ಸಿಗೆ ಇಷ್ಟವಾದವನ ಹತ್ತಿರಕ್ಕೆ ಹೋಗಿ ಮೂರುದಿನ ಸಂಸಾರ ಮಾಡಿದರೂ ಸಾಕೆಂದು ಅಂದುಕೊಂಡು ಪತಿಯನ್ನು ಬಿಟ್ಟು ಹೋಗಿದ್ದಾಳೆ. ಪ್ರಸ್ತುತಕ್ಕೆ ಹೋಗಿರುವುದು ದೊಡ್ಡ ಹೆಂಡತಿ. ಚಿಕ್ಕಹೆಂಡತಿ ನಾಲ್ಕು ವರ್ಷಗಳಿಂದ ಸಂಸಾರ ಮಾಡುತ್ತಿದ್ದಾಳೆ. ಚಿಕ್ಕ ಹೆಂಡತಿ ವಿಷಯದಲ್ಲಿ ಕೂಡಾ ಪತಿಗೆ ಅನುಮಾನ ಬಂದು ಸಲಹೆಗಾಗಿ ನನ್ನ ಹತ್ತಿರಕ್ಕೆ ಬಂದಿದ್ದಾನೆ. ಬಂದವನು ಹೇಳುವಮಾತುಗಳು ಹೀಗೆ ಇವೆ.

**ಗಂಡ :–** ನನ್ನ ದೊಡ್ಡಹೆಂಡತಿ ಪಕ್ಕದ ಬೀದಿಯವನೊಂದಿಗೆ ಓಡಿಹೋಗಿದ್ದಾಳೆ. ಆಕೆ ಹೋಗಿ ಸುಮಾರು ಮೂರು ತಿಂಗಳಾಗಿದೆ. ಈಗ ನನ್ನ ಚಿಕ್ಕ ಹೆಂಡತಿ ಕೂಡಾ ನನ್ನನ್ನು ಬಿಟ್ಟು ದೊಡ್ಡಹೆಂಡತಿ ಹೋದವನ ಹತ್ತಿರಕ್ಕೇ ಹೋಗು ವಂತಿದ್ದಾಳೆ. ಏಕೆ ಹೀಗೆ ನಡೆಯುತ್ತಾಯಿದೆ?

**ನಾನು :–** ಈಗ ನಿನ್ನ ಚಿಕ್ಕ ಹೆಂಡತಿ ಹೋಗುತ್ತಾಳೇನೋ ಎಂದು ನಿನಗೆ ಅನುಮಾನ ಬಂದಿದೆಯಲ್ಲವೆ! ಹಾಗೆಯೇ ನಿನ್ನ ದೊಡ್ಡ ಹೆಂಡತಿ ಹೋಗುವು ದಕ್ಕಿಂತ ಮೊದಲು, ಆಕೆ ಹೋಗುತ್ತಾಳೆಂದು ಅನುಮಾನ ಬರಲಿಲ್ಲವಾ?

**ಗಂಡ :–** ಆಗಲು ಕೂಡಾ ಆಕೆ ಹೋಗದಮುನ್ನವೇ ಅನುಮಾನ ಬಂದಿದೆ. ಎರಡು ತಿಂಗಳ ಮುಂದೆಯೇ ಅನುಮಾನ ಬಂದು ಪಕ್ಕದ ಬಿದಿಯಲ್ಲಿನವನು ನಮ್ಮ ಬೀದಿಯೊಳಗೆ ಬಾರದಂತೆ ನೋಡಿದ್ದೇನೆ. ಅನುಮಾನ ಬಂದ ಮೊದಲು ಎರಡು ತಿಂಗಳು ನನ್ನ ಹೆಂಡತಿಯನ್ನು ಕಾವಲು ಕಾದು ಅವನ ಹತ್ತಿರಕ್ಕೆ ಹೋಗದಂತೆ ನೋಡಿದ್ದೇನೆ. ಆದರೂ ಆಕೆ ನನ್ನ ಕಣ್ಣುಮುಚ್ಚಿ ಅವನೊಂದಿಗೆ ಓಡಿಹೋಗಿದ್ದಾಳೆ.

**ನಾನು :–** ನಿನ್ನ ದೊಡ್ಡ ಹೆಂಡತಿ ಮೇಲೆ ಅನುಮಾನ ಬಂದು ಆಕೆ ಹೋಗುತ್ತಾಳೆಂದು ತಿಳಿದಾಗ ಆಕೆ ಹೋಗದಂತೆ ಇರುವುದಕ್ಕೆ ಇನ್ನೂ ಏನಾದರೂ ಚರ್ಯೆ ತೆಗೆದುಕೊಂಡಿದ್ದೀಯಾ?

**ಗಂಡ :–** ನನ್ನ ಹೆಂಡತಿ ಹೋದಂತೆ, ನಮ್ಮ ಬೀದಿಯಲ್ಲಿ ಇನ್ನೂ ಐದಾರು ಮಂದಿ ಹೆಂಡತಿಯರು ಮೊದಲೇ ಹೋಗುವುದು ನಡೆದಿದೆ. ಆ ಹೆಂಡತಿಯರು ಹೋದ ಆರುಜನ, ನಾನು ಒಟ್ಟು ಏಳುಜನ ಸೇರಿ ಒಂದು ಸಂಘವಾಗಿ ತಯಾರಾಗಿ, ಪಕ್ಕದಬೀದಿಯಲ್ಲಿನ ದೌರ್ಜನ್ಯವನ್ನು ಎದುರಿಸಬೇಕೆಂದು ಕೊಂಡಿದ್ದೇವೆ.

**ನಾನು :–** ಏಳುಜನ ಹೆಂಡತಿಯರು ಹೋದವರೆಲ್ಲರೂ ಸೇರಿ ಒಂದು ಗುಂಪಾಗಿ ಸಂಘವನ್ನು ಇಟ್ಟುಕೊಂಡಿದ್ದಾರೆ. ಆ ಸಂಘದ ಹೆಸರು ಏನು? ಅದರ ಕೆಲಸವೇನು?

**ಹೆಂಡತಿ :–** ಸಂಘದ ಹೆಸರು "ಹೆಂಡತಿರಕ್ಷಣೆ ಪರಿಷತ್" ನಮ್ಮ ಪರಿಷತ್ ಮುಖ್ಯಕಾರ್ಯ ಪಕ್ಕದಬೀದಿಯವರು ಎಲ್ಲಿ ಗುಂಪಾಗಿ ಸೇರಿದರೂ, ಅವರನ್ನು ಚದುರಿಸುವುದು, ಅವರು ನಮ್ಮ ಬೀದಿಯೊಳಗೆ ಬರದಂತೆ ನೋಡುವುದು. ಬಂದರೆ ಅವರಮೇಲೆ ದಾಳಿಮಾಡುವುದು, ಪ್ರಕ್ಕದಬೀದಿಯವರು ನಮ್ಮ ಬೀದಿಯಲ್ಲಿನ ಹೆಂಗಸರಿಗೆ ಎಲ್ಲಿ ಕಾಣಿಸದಂತೆ ನೋಡಿಕೊಳ್ಳುವುದು.

**ನಾನು :–** ಈ ಮಧ್ಯೆ ನಿಮ್ಮ ಬಂಧುವು ಪಕ್ಕದ ಊರಿನಿಂದ ಬಂದರೆ, ನಿಮ್ಮ ಪರಿಷತ್‌ನವರು ನಿಮ್ಮ ಬೀದಿಯೊಳಗೆ ಬಂದವನು ನಿಮ್ಮ ಸಂಬಂಧಿಕನೆಂದು ತಿಳಿಯದೆ ಅವನು ಪಕ್ಕದಬೀದಿಯವನೇ ಎಂದು ಆತನ ಮೇಲೆ ದಾಳಿ ಮಾಡಿದ್ದಾರಂತೆ. ಆತನು ಒಂದುಕಡೆ ನಾನು ಇಂತಹವನೆಂದು ಹೇಳಿದರೂ ಕೇಳದಂತೆ, ಪಕ್ಕದಬೀದಿಯವನೆಂದು ಆತನನ್ನು ಹೊಡೆದಿದ್ದಾರಂತೆ. ನಿಮ್ಮ ಪರಿಷತ್‌ನವರು ತಮ್ಮವನನ್ನೇ ಗುರುತಿಸದೆ ಪಕ್ಕದ ಬೀದಿಯವನೆಂದು ದಾಳಿಮಾಡುವುದರಿಂದ ನಿಮ್ಮ ಸಂಬಂಧಿಕನು ಕೂಡಾ ನಿಮ್ಮನ್ನು ಅಸಹ್ಯ ಪಟ್ಟುಕೊಳ್ಳುತ್ತಾನೆ ಅಲ್ಲವೆ! ತಮ್ಮವರು ಕಾಣಿಸಿದರೇ ಸ್ವಲ್ಪವಾದರೂ ವಿಚಾರಿಸದೆ,

ಅವನು ಹೇಳುವುದು ಕೇಳದಂತೆ, ನಿಮ್ಮವನ ಮೇಲೆ ನೀವು ದಾಳಿಮಾಡುವುದು ಒಳ್ಳೆಯದಾ?

**ಗಂಡ :–** ಒಳ್ಳೆಯದಲ್ಲ. ಅದು ತಿಳಿಯದೆ ನಡೆದ ಕೆಲಸ. ನಂತರ ನಾವು ಕೂಡಾ ಚಿಂತಿಸಿದ್ದೇವೆ.

**ನಾನು :–** ದಾಳಿಮಾಡುವುದಕ್ಕಿಂತ ಮುಂಚೆ ಆತನು ಯಾರು? ಆತನು ಹೇಳುವ ಸಮಾಧಾನ ಏನು? ಎಂದು ನೋಡದಂತೆ ನಿಮ್ಮ ಹೆಂಡತಿಯರು ಎಲ್ಲಿ ಹೋಗುತ್ತಾರೊ ಎಂದು ಅನುಮಾನದಿಂದ ಎಲ್ಲರನ್ನು ಪಕ್ಕದ ಬೀದಿಯವರಂತೆ ನೋಡಿದರೆ, ನಿಮ್ಮನ್ನು ಕುರಿತು ನಿಮ್ಮ ಪರಿಷತ್‌ನ್ನು ಕುರಿತು ನಿಮ್ಮವರಿಗೆ ನಿಮ್ಮ ನೆಂಟರಿಗೆ ಬೇಸರವಾಗುತ್ತದೆ ಅಲ್ಲವೆ! ಆಗ ನಿಮ್ಮಲ್ಲಿ ನೀವು ಮಾತನಾಡಿ ಕೊಂಡಂತಾಗುತ್ತದೆ ಅಲ್ಲವೆ!

**ಗಂಡ :–** ಅದು ತಪ್ಪು ಕೆಲಸವೇ. ಈಗಿನಿಂದ ಹಾಗೆ ತಪ್ಪು ನಡೆಯದಂತೆ ನೋಡಿಕೊಳ್ಳುತ್ತೇವೆ. ನಮ್ಮವರ ಮೇಲೆ ದಾಳಿಮಾಡದಂತೆ ಪಕ್ಕದಬೀದಿಯವರ ಮೇಲೆಯೇ ದಾಳಿಮಾಡುತ್ತೇವೆ.

**ನಾನು :–** ಹಾಗೆ ದಾಳಿಗಳು ಮಾಡುತ್ತಾ ಹೋದರೆ, ನೋಡುವವರಿಗು ಕೂಡಾ ನೀವೇ ಕೆಟ್ಟದಾಗಿ ಕಾಣಿಸುತ್ತೀರ. ಹಿಂಸೆಯಿಂದ ಏನನ್ನು ಸಾಧಿಸಲಾರೆವು. ಸೌಮ್ಯವಾಗಿ ಆಲೋಚಿಸಿ, ಬಂದಿರುವ ಸಮಸ್ಯಗೆ ಪರಿಷ್ಕಾರವನ್ನು ಹುಡುಕಬೇಕು. ಆದರೆ ಎಲ್ಲದಕ್ಕು ದಾಳಿಗಳು, ಹಿಂಸೆಗಳು ಪರಿಷ್ಕಾರವಲ್ಲ. ಪಕ್ಕದಬೀದಿಯವನು ಅಂದವಾಗಿ ಕಾಣಿಸಿದ್ದಾನೆಂದು ನಿನ್ನ ಹೆಂಡತಿ ಹೋಗಿದ್ದಾಳೆ. ಇರುವ ಎರಡನೆ ಹೆಂಡತಿ ಕೂಡಾ ಹೋಗುತ್ತಾಳೆಂದು ಅನುಮಾನ ಬಂದಿದೆ. ಹೋದವಳು ಏಕೆ ಹೋಗಿದ್ದಾಳೆ? ಈಗಿರುವ ಆಕೆ ಏಕೆ ಹೋಗಬೇಕೆಂದು ನೋಡುತ್ತಿದ್ದಾಳೆಂದು ಆಲೋಚಿಸಿದರೆ ಬಂದಿರುವ ಸಮಸ್ಯೆ ಎಲ್ಲಾ ಎದುರಿಗಿರುವ ವ್ಯಕ್ತಿ ಅಂದವಾಗಿ ಕಾಣಿಸುವುದೇ ಕಾರಣವಾಗಿ ಇದೆ. ಹಾಗಿರುವಾಗ ಪಕ್ಕದಬೀದಿಯವನನ್ನು ಕಾಣಿಸದಂತೆ ಮಾಡುವುದಕ್ಕಿಂತ ನೀನೇ ಅಂದವಾಗಿ ಕಾಣಿಸುವಂತೆ ತಯಾರಾದರೆ ಸರಿಹೋಗುತ್ತದೆ ಅಲ್ಲವೆ! ಎದುರಿಗಿರುವ ವ್ಯಕ್ತಿ ಬಳಸಿದಂತೆ ನೀನೂ ಒಳ್ಳೆಯ ಬಟ್ಟೆಗಳು ಧರಿಸು, ಎದುರಿಗಿರುವ ವ್ಯಕ್ತಿ ಇರುವಂತೆ ನೀನೂ ಒಳ್ಳೆಯ ಸೆಂಟು

ಬಳಸಿ, ಎದುರಿಗಿರುವ ವ್ಯಕ್ತಿ ತಲೆಬಾಚಿಕೊಂಡಂತೆ ನೀನು ಕೂಡಾ ತಲೆ ಬಾಚಿಕೊಂಡು ಅಂದವಾಗಿ ಕಾಣಿಸಿದರೇ, ನಿನ್ನ ಹೆಂಡತಿ ನಿನ್ನನ್ನು ಬಿಟ್ಟು ಇನ್ನೊಬ್ಬನ ಹತ್ತಿರಕ್ಕೆ ಏಕೆ ಹೋಗುತ್ತಾಳೆ? ಹೆಂಡತಿಗೆ ಇಷ್ಟವಾದಂತೆ ಇದ್ದರೆ ಸರಿಹೋಗುವುದಕ್ಕೆ ಸಂಘವನ್ನಿಟ್ಟು ಕಾವಲಾಗಿದ್ದು ಕಾಣಿಸಿದವನನ್ನು ಹೊಡೆದರೆ ಸಮಸ್ಯೆ ಬಗೆಹರಿಯುತ್ತದಾ? ಸಮಸ್ಯೆ ಎಲ್ಲಾ ನೀನು ಅಂದವಾಗಿ ಇಲ್ಲದೇ ಹೋಗುವುದು, ಎದುರಿಗಿರುವ ವ್ಯಕ್ತಿ ಅಂದವಾಗಿರುವುದು. ಆದ್ದರಿಂದಲೇ ಒಬ್ಬ ಹೆಂಡತಿ ಹೋಗಿದ್ದಾಳೆ. ಮತ್ತೊಬ್ಬ ಹೆಂಡತಿಹೋಗುವಂತಿದ್ದಾಳೆ. ನಿನ್ನ ಹೆಂಡತಿ ಹೋಗುವುದಕ್ಕೆ ಕಾರಣವೇನಾದರೇ ಇದೆಯೋ ಅದನ್ನು ಇಲ್ಲದಂತೆ ಮಾಡಿಕೊಂಡರೆ ಸಮಸ್ಯೆ ಬಗೆಹರಿಯುತ್ತದೆ. ಹಾಗಲ್ಲದೆ ಮೂಗಿಗೆ ನೆಗಡೆಯಾದರೆ ಮೊಣಕಾಲಿಗೆ ಆಪರೇಷನ್ ಮಾಡುತ್ತೇನೆಂದರೆ ಹೇಗೆ ಸರಿಹೋಗುತ್ತದೆ.

ಇದು ತಮ್ಮ ಹೆಂಡತಿಯರು ತಮ್ಮನ್ನು ಬಿಟ್ಟುಹೋಗುತ್ತಿದ್ದಾರೆನ್ನುವ ಗಂಡಂದಿರ ಸಮಸ್ಯೆಯಲ್ಲ. ತಮ್ಮ ಮತವನ್ನು ಬಿಟ್ಟು ಮತ್ತೊಂದು ಮತದೊಳಗೆ ಹೋಗುತ್ತಿದ್ದಾರೆನ್ನುವವರ ಸಮಸ್ಯೆ ಕೂಡಾ ಹೀಗೆಯೇ ಇದೆ. ಪ್ರಕ್ಕದ ಮತದವನು ಅವನ ಗ್ರಂಥವನ್ನು ಕುರಿತು, ಅವನ ಮತವನ್ನು ಕುರಿತು, ಅವನ ದೇವರನ್ನು ಕುರಿತು ಹೇಳುತ್ತಾ ಹೋಗುತ್ತಿದ್ದರೆ ತಮ್ಮ ಗ್ರಂಥಗಳನ್ನು ಕುರಿತಾಗಲಿ, ತಮ್ಮ ಜ್ಞಾನವನ್ನು ಕುರಿತಾಗಲಿ, ತಮ್ಮ ದೇವರನ್ನು ಕುರಿತಾಗಲಿ ಹೇಳದ ಸ್ವಮತವನ್ನು ಬಿಟ್ಟು ಎಲ್ಲಾ ಹೇಳುವುದೇ ತಮ್ಮ ಕೆಲಸವಾಗಿ ಇಟ್ಟುಕೊಂಡವರ ಮತದೊಳಗೆ ಎಷ್ಟೋಜನ ಹೋಗಿದ್ದಾರೆ. ಹಾಗೆಯೇ ಎಷ್ಟೋಜನ ಹೋಗುವವರು ಕೂಡಾ ಇದ್ದಾರೆ. ಒಬ್ಬ ಗುರುವನ್ನು ಬಿಟ್ಟು ಶಿಷ್ಯನು ಮತ್ತೊಬ್ಬ ಗುರುವನ್ನು ಆಶ್ರಯಿಸಿದರೆ ಅಲ್ಲಿನ ಸಮಸ್ಯೆ ಮೊದಲ ಗುರು ಹತ್ತಿರವಿಲ್ಲದ ಜ್ಞಾನ ಎರಡನೆ ಗುರು ಹತ್ತಿರ ಕಾಣಿಸುವುದೇ ಕಾರಣ. ಆ ಸಮಸ್ಯೆ ಬಗೆಹರಿಯಬೇಕೆಂದರೇ ಜ್ಞಾನದಿಂದಲೇ ಬಗೆಹರಿಯಬೇಕು. ಹಾಗೇ ಹೆಂಡತಿ ಗಂಡನನ್ನು ಬಿಟ್ಟು ಮತ್ತೊಬ್ಬ ಪುರುಷನ ಹತ್ತಿರಕ್ಕೆ ಹೋಗಿದ್ದಾಳೆಂದರೇ, ಅಲ್ಲಿ ಸಮಸ್ಯೆ ಏನಾದರೇ ಇದೆಯೋ ಅದರಿಂದಲೇ ಲೋಪವನ್ನು ಸರಿಪಡಿಸಬೇಕು. ಹಾಗೆಯೇ ಒಬ್ಬ ಮತಸ್ಥನು ಇನ್ನೊಂದು ಮತದೊಳಗೆ ಹೋಗುತ್ತಿದ್ದಾನೆಂದರೇ ಅಲ್ಲಿನ ಸಮಸ್ಯೆ ಎಲ್ಲವೂ ಇನ್ನೊಂದು ಮತದಲ್ಲಿ ಇರುವುದೇನೊ ತನ್ನ ಮತದಲ್ಲಿ ಇಲ್ಲದಿರುವುದೇನೊ ನೋಡಿ ಅದನ್ನು

ಸರಿಪಡಿಸಿದರೆ ಸರಿಹೋಗುತ್ತದೆ. ಹಾಗಲ್ಲದೆ ಪರಿಷತ್‌ಗಳು ದಳಗಳು ತಯಾರಿ ಮಾಡಿಕೊಂಡು ಅನ್ಯಮತದವರ ಮೇಲೆ ದಾಳಿಮಾಡುವುದರಿಂದ ಸಮಸ್ಯೆ ಬಗೆಹರಿಯುವುದಿಲ್ಲ. ಹಾಗೆ ಸಮಸ್ಯೆ ಬಗೆಹರಿಯದಿರುವುದಲ್ಲದೆ ಜ್ಞಾನ ಇಲ್ಲದಿರುವಾಗ ತನ್ನ ಮತದವರನ್ನು ಕೂಡಾ ಗುರುತಿಸಲಾರದೆ ಬೋಧನೆಗಳು ಹೇಳುವವರೆಲ್ಲಾ ಇತರೆ ಮತದವರಾಗಿ ಲೆಕ್ಕಿಸಿಕೊಂಡರೆ, ಸ್ವಮತದವರನ್ನು ಕೂಡಾ ಅನ್ಯಮತದವರಾಗಿ ಲೆಕ್ಕಿಸಿಕೊಂಡು ದಾಳಿಮಾಡಿದರೆ, ನಮ್ಮ ಬೆರಳಿನಿಂದ ನಮ್ಮ ಕಣ್ಣನ್ನು ತಿವಿದುಕೊಂಡಂತೆ ಅಲ್ಲವೆ!

ಗಂಡನನ್ನು ಬಿಟ್ಟು ತನ್ನ ಕುಲ ತನ್ನ ಮತವಲ್ಲದವನ ಹತ್ತಿರಕ್ಕೆ ಬಂದು ಸಂಸಾರ ಮಾಡುತ್ತಿದ್ದ ಹೆಂಡತಿಯನ್ನು ಬೇಟಿಯಾಗಿ, 'ನೀನು ನಿನ್ನ ಗಂಡನನ್ನು ಬಿಟ್ಟು, ನಿನ್ನ ಕುಲವಲ್ಲದವನ ಹತ್ತಿರಕ್ಕೆ ಬಂದಿದ್ದೀಯಲ್ಲ! ಕಾರಣವೇನು ಎಂದು ಕೇಳಿದಾಗ! ಆಗ ಆಕೆ ಹೀಗೆ ಹೇಳಿದ್ದಾಳೆ. "ಮನಸ್ಸಿಗೆ ಇಷ್ಟವಾದವನು ಗಂಡನಾಗಲಿ, ಮಂಗಳಸೂತ್ರ ಕಟ್ಟಿದವನು ಗಂಡನಲ್ಲ" ಅಲ್ಲವೆ! ಒಬ್ಬ ಸ್ತ್ರೀಗೆ ತಾಳಿಕಟ್ಟಿದಷ್ಟುಮಾತ್ರಕ್ಕೆ ಗಂಡ ಎಂದುಕೊಳ್ಳುವುದು ತಪ್ಪು. ಮನಸ್ಸಿಗೆ ಸಂಬಂಧಿಸಿದವನು ಗಂಡ. ತಾಳಿಕಟ್ಟಿದವನು ಶರೀರಕ್ಕೆ ಗಂಡನಾಗಬಹುದು ಆದರೆ ಮನಸ್ಸಿಗೆ ಗಂಡನಲ್ಲ. ಮನಸ್ಸಿಗೆ ಇಷ್ಟವಾದವನೇ ಗಂಡ ಆಗುತ್ತಾನೆ. ಮನಸ್ಸಿಗೆ ಇಷ್ಟವಾದಂತೆ ತಾಳಿಕಟ್ಟಿದವನಿರುವಾಗ ಆತನೇ ನಿಜವಾದ ಗಂಡ ಆಗುತ್ತಾನೆ. ಗಂಡನ ಹತ್ತಿರ ಭರಿಸುವ ಲಕ್ಷಣಗಳು ಇಲ್ಲದಿರುವಾಗ ಗಂಡನಲ್ಲದಂತೆ, ಮತದಲ್ಲಿ ಧರ್ಮ ಇಲ್ಲದಿರುವಾಗ ಅದು ಮತವಲ್ಲ. ಹಾಗೆಯೇ ಗುರುವಿನಲ್ಲಿ ಜ್ಞಾನ ಇಲ್ಲದಿರುವಾಗ ಆತನು ಗುರುವಲ್ಲ. ಆದ್ದರಿಂದ ಮತದಲ್ಲಿ ಧರ್ಮವೂ, ಗುರುವಿನಲ್ಲಿ ಜ್ಞಾನವೂ, ಗಂಡನಲ್ಲಿ ಪುರುಷತ್ವವೂ ಇದ್ದಾಗಲೇ ಆಯಾ ಹೆಸರುಗಳಿಗೆ ಅವರು ಸರಿಹೋಗುತ್ತಾರೆ. ಹಾಗೆ ಇಲ್ಲದಿರುವಾಗ ಅವರನ್ನು ಬಿಡುವುದರಲ್ಲಿ ತಪ್ಪಿಲ್ಲ.

**ದಾನ ಅಧರ್ಮವೇ ಆದರೂ ಅದನ್ನು ಧರ್ಮವಾಗಿ ಬದಲಿಸಿಕೊಳ್ಳುವ ಅವಕಾಶ ಇದೆ. ಬಲಗೈಯಿಂದ ಮಾಡುವ ದಾನ, ಎಡಗೈಯಿಗು ಕೂಡಾ ತಿಳಿಯದಂತೆ ಮಾಡಿದರೆ ಅದು ಧರ್ಮವಾಗುತ್ತದೆ.**

## 50. ದಿಗಂಬರ ಸನ್ಯಾಸಿಗೆ ಅಗಸನ ಅವಶ್ಯಕತೆಯೇ ಇಲ್ಲ.

ಅಗಸ ಎಂದರೇ ಕೊಳೆಯಾದ ಬಟ್ಟೆಗಳನ್ನು ಹೊಗೆದು ಅವುಗಳಲ್ಲಿನ ಕೊಳೆಯೆಲ್ಲವನ್ನು ಇಲ್ಲದಂತೆ ಶುಭ್ರ ಮಾಡುವವನೆಂದು ಎಲ್ಲರಿಗೂ ತಿಳಿದಿರುವುದೆ. ಜ್ಞಾನ ಎಂದರೇ ಏನು? ಎಂದು ಪ್ರಶ್ನಿಸಿದರೇ ಅಜ್ಞಾನವನ್ನು ಇಲ್ಲದಂತೆ ಮಾಡಿಕೊಳ್ಳುವುದೇ ಜ್ಞಾನವೆಂದು ಉತ್ತರವಿದೆ. ಅಜ್ಞಾನ ಇಲ್ಲದಂತೆ ಹೋದಂತೆಲ್ಲ ಮನುಷ್ಯ ಜ್ಞಾನಿ ಆಗುತ್ತಾನೆ. ಅಜ್ಞಾನವನ್ನು ಇಲ್ಲದಂತೆ ಮಾಡಿ ಜ್ಞಾನವನ್ನು ಉಂಟುಮಾಡುವವನು ಗುರು. ಹಾಗೆಯೇ ಕೊಳೆಯನ್ನು ಇಲ್ಲದಂತೆ ಮಾಡಿ ಶುಭ್ರಗೊಳಿಸುವವನು ಅಗಸ.  ಒಂದು ವಿಧವಾಗಿ ಕೊಳೆಯ ಬಟ್ಟೆಗಳನ್ನು ಶುಭ್ರಮಾಡುವ ಅಗಸನನ್ನು, ಅಜ್ಞಾನವೆನ್ನುವ ಕೊಳೆಯನ್ನು ಇಲ್ಲದಂತೆ ಮಾಡುವ ಗುರುವನ್ನು ಒಂದಾಗಿ ಹೋಲಿಸಿ ಹೇಳಬಹುದು. ಎಲ್ಲಿ ಮಾಸಿದ ಬಟ್ಟೆಗಳಿವೆಯೋ ಅಲ್ಲಿ ಅಗಸನ ಅಗತ್ಯವಿದೆ. ಹಾಗೆಯೇ ಎಲ್ಲಿ ಅಜ್ಞಾನವಿದೆಯೋ ಅಲ್ಲಿ ಗುರು ಅಗತ್ಯ.

ಅಂಬರ ಎಂದರೇ ಆಕಾಶ. ದಿಗ+ಅಂಬರ=ದಿಗಂಬರ ಆಗುತ್ತದೆ. ಅಂಬರ ಎಂದರೇ ಆಕಾಶವಾದಾಗ, ದಿಗಂಬರಕ್ಕೆ ಅರ್ಥ ಏನೆಂದರೇ! ಆಕಾಶ ಶೂನ್ಯವಾದಂತೆ ಯಾವ ಗುಣಗಳಿಲ್ಲದೆ ಶೂನ್ಯವಾಗಿ ಇರುವವನೆಂದು ಅರ್ಥ. ಆಕಾಶ ಖಾಲಿಯಾಗಿ ಇರುವುದು. ಅಂಬರಕ್ಕೆ 'ದಿಗ' ಎನ್ನುವ ಎರಡು ಅಕ್ಷರಗಳನ್ನು ಮೊದಲು ಸೇರಿಸಿ ದಿಗಂಬರ ಎಂದರೇ ಆಕಾಶದಲ್ಲಿ ಏನೂ ಇಲ್ಲದಂತೆ, ಯಾರ ಶರೀರಕ್ಕೆ ಮೇಲ್ಭಾಗದಲ್ಲಿರುವ ತಲೆಯಲ್ಲಿ ಯಾವ ಗುಣಗಳು ಇಲ್ಲದೇ ಇರುತ್ತಾನೊ ಅವನನ್ನು ದಿಗಂಬರನು ಎಂದು ಕರೆಯುತ್ತೇವೆ. ಆದರೇ ಗುಣಗಳು ಇಲ್ಲದವನು ಭೂಮಿಮೇಲೆ ಯಾರೂ ಇಲ್ಲವೆಂದು ಒಂದು ವಿಧವಾಗಿ ಹೇಳಬಹುದು.  ಏಕೆಂದರೇ ತಲೆಯಲ್ಲಿರುವ ಗುಣಚಕ್ರದಲ್ಲಿ ಜೀವಿಯು ನಿವಾಸಿಸುತ್ತಿದ್ದಾನೆ. ಗುಣಗಳನ್ನು ಹೊಂದಿದ್ದು ಗುಣಗಳ ಮಧ್ಯೆ ಜೀವಿಸುವ ಜೀವಿಗೆ ಗುಣಗಳು ಇಲ್ಲದಂತೆ ಇರುತ್ತಾನೆನ್ನುವುದು ಅಸತ್ಯ. ಆದರೇ ದಿಗಂಬರನು ಎನ್ನುವ ಮಾತಿಗೆ ಗುಣಗಳು ಇಲ್ಲದಂತೆ ಶೂನ್ಯವಾಗಿ ಇರುವವನು ಎನ್ನುವ ಅರ್ಥ ಸರಿಹೋಗುತ್ತದಾ ಎಂದರೇ ಒಂದು ವಿಧವಾಗಿ ಸರಿಹೋಗುತ್ತದೆಂದೇ

ಹೇಳಬಹುದು. ಆಕಾಶದ ಮೇಲೆಯೇ ಅಲ್ಲದೇ ನಿನಗು ನನಗು ಮಧ್ಯೆ ಇರುವುದು ಕೂಡಾ ಆಕಾಶವೇ. ಆಕಾಶ ಪ್ರತಿ ವಸ್ತುವನ್ನೂ, ಪ್ರತಿ ಮನುಷ್ಯನನ್ನು, ಪ್ರತಿ ಪದಾರ್ಥವನ್ನೂ ಅಂಟಿಕೊಂಡಿದೆ. ಏನನ್ನು ಅಂಟಿಕೊಂಡಿದ್ದರೂ ಆಕಾಶಕ್ಕೆ ಅದರೊಂದಿಗೆ ಸಂಬಂಧವಿಲ್ಲ. ಹಾಗೆಯೇ ಜೀವಿಯು ಯಾವ ಗುಣವನ್ನು ಅಂಟಿಯಿದ್ದರೂ, ಯಾವ ಗುಣದಿಂದ ಕೆಲಸ ಮಾಡುತ್ತಿದ್ದರೂ, ಆಕಾಶದಂತೆ ಆ ಗುಣವನ್ನು ಅಂಟದ ಸ್ಥಿತಿ ಹೊಂದಿರುವವನು ದಿಗಂಬರನು ಎಂದು ಆಧ್ಯಾತ್ಮಿಕದ ಪ್ರಕಾರ ಹೇಳಬಹುದು. ಹೊರಗಿನ ಪ್ರಪಂಚದಲ್ಲಿ ಬಟ್ಟೆಗಳಿಲ್ಲದವ ನೆಂದು ಅರ್ಥ. ಬಟ್ಟೆಗಳು ಧರಿಸದವನಿಗೆ ಬಟ್ಟೆಗಳು ಕೊಳೆಯಾಗುತ್ತವೆನ್ನುವ ಮಾತೇ ಇಲ್ಲ. ಬಟ್ಟೆಗಳೇ ಇಲ್ಲದಿರುವಾಗ ಅವುಗಳನ್ನು ಶುಭ್ರಮಾಡುವ ಅಗಸನು ಕೂಡಾ ಅಗತ್ಯವಿಲ್ಲ.

ಹಾಗೆಯೇ ದಿಗಂಬರನಾದವನು ಗುಣಗಳೊಂದಿಗೆ ಸಂಬಂಧವೇ ಇಲ್ಲದಂತಿರುತ್ತಾನೆ. ಗುಣಗಳೊಂದಿಗೆ ಇರುವವನಾದರೆ ಅಜ್ಞಾನದಲ್ಲಿ ಇರುತ್ತಾನೆ. ಆದ್ದರಿಂದ ಅವನಿಗೆ ಗುರು ಅಗತ್ಯವಿದೆ. ಅಜ್ಞಾನ ಎನ್ನುವುದು ಇಲ್ಲದಿರುವಾಗ ಗುರುವಿನ ಅವಶ್ಯಕತೆಯೇ ಇಲ್ಲ ಅಲ್ಲವೆ! ಹಾಗೆಯೇ ಗುಣಗಳಲ್ಲಿ ಇದ್ದರೂ ಅವುಗಳನ್ನು ಅಂಟದವನು ದಿಗಂಬರನು ಅಜ್ಞಾನ ಇಲ್ಲದವನು ಆಗುತ್ತಾನೆ. ಆದರೇ ಕೆಲವರು ಇಲ್ಲಿ ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೇ! "ನಿದ್ರೆ ಹೋಗುವಾಗ ಜೀವಿಯು ಗುಣಗಳಲ್ಲಿದ್ದರೂ ಅವುಗಳನ್ನು ಅಂಟದಂತಿ ದ್ದಾನೆ ಅಲ್ಲವೇ! ಹಾಗಿರುವಾಗ ನಿದ್ರೆ ಹೋಗುವವನನ್ನು ಯಾರನ್ನಾದರೂ ದಿಗಂಬರನೇ ಎನ್ನಬಹುದು ಅಲ್ಲವೆ!" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೇ! ಎಚ್ಚರದಲ್ಲಿ ಬುದ್ಧಿ, ಅಹಮ್ ಕೆಲಸ ಮಾಡುವುದರಿಂದ ಅಹಮ್ ಜೀವಿಯನ್ನು ಗುಣಗಳಿಂದ ಅಂಟಿಸುತ್ತಿದೆ, ಜೀವಿಯನ್ನು ಗುಣಗ ಳೊಂದಿಗೆ ಸಂಬಂಧಪಡುವಂತೆ ಅಹಮ್ ಮಾಡುತ್ತಿದೆ. ನಿದ್ರೆಯಲ್ಲಿ ಗುಣಗಳೊಂದಿಗೆ ಜೀವಿಯನ್ನು ಸಂಬಂಧಪಡಿಸುವ ಅಹಂ ಇಲ್ಲದಿರುವುದರಿಂದ ಆ ಸಮಯದಲ್ಲಿ ಜೀವಿಯನ್ನು ದಿಗಂಬರನು ಎನ್ನಬಹುದು. ಆದರೇ ಈ

ವಾಕ್ಯದಲ್ಲಿ ದಿಗಂಬರ ಸನ್ಯಾಸಿ ಎನ್ನುವುದರಿಂದ ನಿದ್ರೆಯಲ್ಲಿಯೇ ಅಲ್ಲದೆ ಎಚ್ಚರದಲ್ಲಿ ಕೂಡಾ ಗುಣಗಳನ್ನು ಅಂಟದವನೆಂದು ತಿಳಿದು ಹೋಗುತ್ತಿದೆ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಆತ್ಮಸಂಯಮಯೋಗ ಎನ್ನುವ ಅಧ್ಯಾಯದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ.

**ಶ್ಲೋ॥ ಅನಾಶ್ರಿತಃ ಕರ್ಮಫಲಮ್ ಕಾರ್ಯಂ ಕರ್ಮಕರೋತಿಯಃ ।**
**ಸ ಸನ್ಯಾಸೀಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ ॥**

**ಭಾವಾರ್ಥ :–** "ಕರ್ಮಫಲವನ್ನು ಆಶ್ರಯಿಸದೆ ಯಾರು ಕಾರ್ಯಗಳನ್ನು ಮಾಡುತ್ತಾನೊ ಅವನೇ ನಿಜವಾದ ಸನ್ಯಾಸಿ, ನಿಜವಾದ ಯೋಗಿ ಎಂದು ಹೇಳಬಹುದು. ಆದರೇ ಅಗ್ನಿ ಇಲ್ಲದವನನ್ನಾಗಲಿ, ಕೆಲಸಗಳನ್ನು ಮಾಡದೇ ಇರುವವನನ್ನಾಗಲಿ ಸನ್ಯಾಸಿ ಎಂದಾಗಲಿ, ಯೋಗಿ ಎಂದಾಗಲಿ ಅನ್ನುವುದಕ್ಕೆ ಸಾಧ್ಯವಿಲ್ಲ". ಈ ಭಾವದಲ್ಲಿ ಜ್ಞಾನವೆನ್ನುವ ಅಗ್ನಿಯಿಲ್ಲದವನನ್ನು, ಕೆಲಸಗಳು ಮಾಡದವನನ್ನು ಯೋಗಿ ಎಂದಾಗಲಿ, ಸನ್ಯಾಸಿ ಎಂದಾಗಲಿ, ಅನ್ನಬಾರದೆಂದು ಹೇಳಿರುವುದರಿಂದ ನಮಗೆ ತಿಳಿಯುವುದೇನೆಂದರೇ! ಮನುಷ್ಯ ಗುಣಗಳು ಇಲ್ಲದಂತೆ ಕೆಲಸ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಜೀವಿಯು ಗುಣಗಳಲ್ಲಿ ಇದ್ದರೂ ಅವುಗಳೊಂದಿಗೆ ಸಂಬಂಧವಿಲ್ಲದಂತೆ ಎಚ್ಚರಕೆಯಲ್ಲಿ ಕೆಲಸ ಮಾಡುವ ವನು ನಿಜವಾದ ಯೋಗಿ, ನಿಜವಾದ ಸನ್ಯಾಸಿ ಎಂದು ತಿಳಿಯುತ್ತಿದೆ. ಅಶುದ್ಧ ಪದಾರ್ಥವನ್ನು ಅಂಟಿರುವ ಆಕಾಶ ಹೇಗೆ ಅಶುದ್ಧವಲ್ಲವೊ, ಹಾಗೆಯೇ ಗುಣಗಳ ಮಧ್ಯದಲ್ಲಿರುವ ಯೋಗಿ ಗುಣಗಳ ಮಾಲಿನ್ಯವನ್ನು ಅಂಟದಂತಿರುತ್ತಾನೆ. ಆದ್ದರಿಂದ ಯೋಗಿ ಆದವನಿಗೆ ಜ್ಞಾನವನ್ನು ಬೋಧಿಸುವ ಗುರು ಇಲ್ಲ. ಇದೇ ವಿಷಯವನ್ನು ತಿಳಿಸುವುದಕ್ಕೆ "ದಿಗಂಬರ ಸನ್ಯಾಸಿಗೆ ಅಗಸನ ಅವಶ್ಯಕತೆ ಯಿಲ್ಲ" ಎಂದು ಹೇಳಿದ್ದಾರೆ.

**ನೀನು ಧನಿಕನಾದರೇ ರಾಜಶ್ರೀ ಎಂದು ಹೆಸರಿನಮುಂದೆ ಬರೆದುಕೊ, ಜ್ಞಾನಿಯಾದರೆ ಇಂದುಶ್ರೀ ಎಂದು ಬರೆದುಕೋ, ಯೋಗಿಯಾದರೇ ಬ್ರಹ್ಮಶ್ರೀ ಎಂದು ಬರೆದುಕೋ.**

## 51. ಧರ್ಮಕ್ಕೆ ಹೋದರೆ ಕರ್ಮ ಅಂಟಿಕೊಂಡಿದೆಯಂತೆ

ದೇವರ ವಿಷಯದಲ್ಲಿ ಧರ್ಮಗಳು, ಅಧರ್ಮಗಳು ಇವೆ. ದೇವರ ಧರ್ಮಗಳು ದೇವರನ್ನು ಸೇರಿಸುತ್ತವೆ, ಅಧರ್ಮಗಳು ದೇವರನ್ನು ಸೇರಿಸುವುದಿಲ್ಲ. ಧರ್ಮಗಳನ್ನಾಗಲಿ, ಅಧರ್ಮಗಳನ್ನಾಗಲಿ ಮೊದಲು ಧರ್ಮವಾಗಿಯೇ ಎಲ್ಲರೂ ತಿಳಿದುಕೊಳ್ಳುತ್ತಿದ್ದಾರೆ. ನಂತರ ಅವುಗಳನ್ನು ಆಚರಿಸುವ ವಿಧಾನವನ್ನನುಸರಿಸಿ ಅವು ಧರ್ಮಗಳಾಗಿ ನಿಲ್ಲುತ್ತಿವೆ ಅಥವಾ ಅಧರ್ಮಗಳಾಗಿ ಆದರೂ ಆಗುತ್ತಿವೆ. ಧರ್ಮಗಳು ಯಾವುವು ಅಧರ್ಮಗಳು ಯಾವುವುಯೆಂದು ತಿಳಿಯುವುದಕ್ಕೆ ಭಗವದ್ಗೀತೆಯನ್ನು ನೋಡಿದರೆ ಅದರಲ್ಲಿ ಭಗವಂತನು ತಿಳಿಸಿದ ಧರ್ಮಗಳು ಮೂರು, ಅಧರ್ಮಗಳು ನಾಲ್ಕು ಇವೆ. ದೇವರು ತಿಳಿಸಿದ ಮೂರು ಧರ್ಮಗಳು ದೇವರನ್ನು ಸೇರಿಸಬಲ್ಲವು. ಆದರೇ ಅಧರ್ಮಗಳು ನಾಲ್ಕು ದೇವರನ್ನು ಸೇರಿಸಲಾರವೆಂದು ಹೇಳುತ್ತಾ ಅವುಗಳಿಂದ ಪುಣ್ಯ ಬರುತ್ತದೆಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ಮೇಲೆ ಹೇಳಿದ ಒಗಟಿನಲ್ಲಿನ ವಾಕ್ಯದಲ್ಲಿ "ಧರ್ಮಕ್ಕೆ ಹೋದರೆ ಕರ್ಮಸುತ್ತಿಕೊಂಡಿದೆ" ಎಂದು ಹೇಳಿದ್ದಾರಲ್ಲವೆ! ಧರ್ಮಕ್ಕೆ ಹೋದರೆ ಕರ್ಮಬರುತ್ತದೆಂದು ಗೀತೆಯಲ್ಲಿ ಕೂಡಾ ಇಲ್ಲ. ಅಧರ್ಮಕ್ಕೆ ಹೋದರೆ ಕರ್ಮವಾದ ಪುಣ್ಯ ಬರುವುದು ನಿಜವೇಯೆಂದು ಗೀತೆಯಲ್ಲಿ ಕೂಡಾ ಇದೆ. ಆದರೇ ತಿಳಿದ ಹಿರಿಯರು ಏಕೆ ಧರ್ಮಕ್ಕು ಕರ್ಮಕ್ಕು ಮುಡಿಹಾಕಿದ್ದಾರೆಂದು ಆಲೋಚಿಸಬೇಕಾಗಿ ಬಂದಿದೆ. ಬುದ್ಧಿವೊಂದರ ಆಲೋಚನೆಗೆ ಸಿಗಲಿಲ್ಲ ಆದರೇ, ಆತ್ಮ ನೀಡಿದ ಯೋಚನೆಗೆ ಒಂದು ವಿಷಯ ತಿಳಿದಿದೆ, ಅದೇನೆಂದರೇ!

ಅಧರ್ಮಗಳು ನಾಲ್ಕು ಇವೆಯಲ್ಲವೇ! ಅವುಗಳನ್ನು ಎರಡು ಭಾಗಗಳಾಗಿ ಪೂರ್ವದಲ್ಲಿ ಆರ್ಯ ಬ್ರಾಹ್ಮಣರು ವಿಭಜಿಸಿದ್ದಾರೆ. 1) ವೇದಾಧ್ಯಯನ, 2) ಯಜ್ಞಗಳು ಮಾಡುವುದು, 3) ತಪಸ್ಸು ಮಾಡುವುದು. ಈ ಮೂರು ಒಂದು ಭಾಗವಾಗಿ ಮಾಡಿ ನಾಲ್ಕನೆಯದಾದ ದಾನವನ್ನು ಒಂದು ಭಾಗವಾಗಿಟ್ಟಿದ್ದಾರೆ. ಮೊದಲು ಮೂರು ಕಾರ್ಯಗಳನ್ನು ಬ್ರಾಹ್ಮಣರು ಮಾಡುವಂತೆ, ಕೊನೆಯ ಭಾಗವಾದ ದಾನವನ್ನು ವೈಶ್ಯರು, ಕ್ಷತ್ರಿಯರು, ಶೂದ್ರರು ಮಾತ್ರ ಮಾಡಬೇಕೆಂದು ಹೇಳಿದ್ದಾರೆ. ವೈಶ್ಯರು, ಕ್ಷತ್ರಿಯರು, ಶೂದ್ರರು ಮಾಡುವ

ದಾನವನ್ನು ಸ್ವೀಕರಿಸುವುದಕ್ಕೆ ಒಬ್ಬ ಬ್ರಾಹ್ಮಣರೇ ಇರುವಂತೆ ಮಾಡಿಕೊಂಡಿದ್ದಾರೆ. ವೇದಾಧ್ಯಯನವಾಗಲಿ, ತಪಸ್ಸಾಗಲಿ ಎರಡೂ ಖರ್ಚುಯಿಲ್ಲದಿರುವವು. ಅವುಗಳನ್ನು ಸುಲಭವಾಗಿ ಮಾಡಬಹುದು. ಒಂದು ಯಜ್ಞ ಖರ್ಚಿನಿಂದ ಕೂಡಿಕೊಂಡಿದೆ. ಅದನ್ನು ಧನಿಕರು ಪ್ರೋತ್ಸಾಹಿಸಿ ಧನಿಕರ ಹಣದಿಂದ ಮಾಡುವುದಾಗಿ ರೂಪಿಸಲಾಗಿದೆ. ಈ ಮೂರು ಕಾರ್ಯಗಳು ಬ್ರಾಹ್ಮಣರು ಮಾಡುವಂತೆ, ದಾನವನ್ನು ಉಳಿದವರು ಮಾಡುವಂತೆ ಮಾಡಿದ್ದಾರೆ. ಈ ವಿಷಯ ಜ್ಞಾನವನ್ನು ತಿಳಿದ ಗುರು ತಿಳಿದು ಗ್ರಹಿಸಿ, ದಾನ ಮಾಡುವುದು ಅಧರ್ಮಕಾರ್ಯವೆಂದು ತಿಳಿದು ಅದರಿಂದ ಕರ್ಮ ಬರುತ್ತದೆಂದು ತಿಳಿದವನಾಗಿ, ದಾನ ಮಾಡುವ ಮೂರು ಜಾತಿಯವರಿಗು ಪುಣ್ಯ ಅಂಟದ ವಿಧಾನವನ್ನು ಬೋಧಿಸಿದ್ದಾನೆ. ಮಾಡುತ್ತಿರುವ ದಾನವನ್ನು ಯಜ್ಞಕರ್ಮವಾಗಿ ಮಾಡೆಂದಿದ್ದಾನೆ. ಯಜ್ಞ ಸಂಬಂಧವಾಗಿ ಮಾಡದ ಯಾವ ಕಾರ್ಯವಾದರೂ ಕರ್ಮವನ್ನು ಅಂಟಿಸುತ್ತದೆಂದು ತಿಳಿಸಿದ್ದಾನೆ. ಇದೇ ವಿಷಯ ಭಗವದ್ಗೀತೆಯಲ್ಲಿ ಕರ್ಮಯೋಗದಲ್ಲಿ 9ನೇ ಶ್ಲೋಕದಲ್ಲಿ ಇದೆ.

**ಶ್ಲೋ॥ ಯಜ್ಞಾರ್ಥಾ ತ್ಕರ್ಮಣೋನ್ಯತ್ರ ಲೋಕೋಯಂ ಕರ್ಮ ಬಂಧನಃ ।**
**ತದರ್ಥಂ ಕರ್ಮ ಕೌಂತೇಯ! ಮುಕ್ತಃ ಸಂಗಸ್ಸಮಾಚರ ॥**

**ಭಾವಾರ್ಥ :–** ಯಜ್ಞಸಂಬಂಧವಾದ ಕರ್ಮವಲ್ಲದೆ ಯಾವ ಕೆಲಸವನ್ನು ಮಾಡಿದರೂ ಅದರಿಂದ ಕರ್ಮಬಂಧನ ಏರ್ಪಡುತ್ತದೆ. ಆದ್ದರಿಂದ ಕರ್ಮ ಫಲವಾದ ಪಾಪಪಣ್ಯಗಳಿಂದ ಸಂಬಂಧಪಡದಂತೆ ಕಾರ್ಯಗಳನ್ನು ಮಾಡು" ಎಂದಿದ್ದಾನೆ. ಇಲ್ಲಿ ದೇವರು ಹೇಳಿದ ಸೂತ್ರದ ಪ್ರಕಾರ ಯಾವ ಕಾರ್ಯವನ್ನು ಮಾಡಿದರೂ ಅದರಲ್ಲಿ ಬರುವ ಕರ್ಮ ಸುಟ್ಟುಹೋಗುವಂತೆ, ಯಜ್ಞವಿಧಾನವಾಗಿ ಜ್ಞಾನಾಗ್ನಿಯಲ್ಲಿ ಕರ್ಮ ಸುಟ್ಟುಹೋಗುವಂತೆ ಮಾಡು ಎಂದು ಹೇಳಿದ್ದಾನೆ. ಹಾಗೆ ಮಾಡದೆ ಹೋದರೆ ಮಾಡಿದ ಕೆಲಸದಲ್ಲಿನ ಕರ್ಮ ಅಂಟುತ್ತದೆಂದು ಹೇಳಿದ್ದಾನೆ. ದಾನಗಳನ್ನು ಮಾಡುವುದು ಕೂಡಾ ಕಾರ್ಯವೇ ಆಗುತ್ತದೆ. ದಾನ ಕಾರ್ಯವನ್ನು ಮಾಡುವಾಗ ಅದು ಅಧರ್ಮವಾಗುವುದರಿಂದ ಪುಣ್ಯ ಬರುವ ಅವಕಾಶವಿದೆ. ಆದ್ದರಿಂದ ಪುಣ್ಯ ಕೂಡಾ ಬಾರದಂತಿರುವುದಕ್ಕೆ

ಅಹಂಕಾರ ರಹಿತವಾಗಿ ಬುದ್ಧಿಯಿಂದ ಫಲಿತವನ್ನು ಆಶಿಸದೆ ಮಾಡುವುದರಿಂದ ಪುಣ್ಯಕರ್ಮ ಕೂಡಾ ಬಾರದಂತೆ ತಪ್ಪಿಸಿಕೊಳ್ಳ ಬಹುದು. ಹಾಗೆ ಮಾಡದೆ ಹೋದರೆ ತಪ್ಪದೆ ಕರ್ಮಬರುತ್ತದೆ. ಮಾಡುವ ಕಾರ್ಯ ದಾನ. ದಾನ ನಾಲ್ಕು ಅಧರ್ಮಗಳಲ್ಲಿ ಒಂದು ಅಧರ್ಮ. ಧರ್ಮ ಕಾರ್ಯದಿಂದ ಪುಣ್ಯ ಬರುತ್ತದೆ. ಆದರೇ ಮೂರು ಧರ್ಮಗಳಲ್ಲಿ ಒಂದಾದ ಕರ್ಮಯೋಗವನ್ನು ಆಚರಿಸಿ ದಾನವನ್ನು ಮಾಡುವುದರಿಂದ ದಾನ ಧರ್ಮದ ಮರೆಯಲ್ಲಿ ಕರ್ಮರಹಿತವಾಗಿ ಹೋಗುತ್ತದೆ. ಧರ್ಮವಾದ ಕರ್ಮಯೋಗವನ್ನು ಆಚರಿಸುವುದರಲ್ಲಿ ಭಂಗವಾದರೆ ಧರ್ಮಕ್ಕೆ ಹೋದರೂ ಕರ್ಮವೇ ಬರುತ್ತದೆ. ಕರ್ಮಯೋಗ ಸೂತ್ರವನ್ನು ದಾನ ಮಾಡುವಾಗ ಮರೆತು ಅಹಂನ್ನು ಹೊಂದಿದರೆ ತಪ್ಪದೆ ಕರ್ಮಬರುತ್ತದೆ. ಆಗ ಧರ್ಮಕ್ಕೆ ಹೋದರೂ, ಕರ್ಮಸುತ್ತಿ ಕೊಂಡಿದೆ ಯೆಂದು ಹೇಳಬಹುದು. ಕರ್ಮಯೋಗ ಧರ್ಮವಾಗುತ್ತದೆ, ದಾನ ಅಧರ್ಮ ವಾಗುತ್ತದೆ. ಧರ್ಮವನ್ನು ಆಚರಿಸುವಾಗ ಅಧರ್ಮವಾದ ದಾನದ ಮೇಲೆ ಸ್ವಲ್ಪ ಧ್ಯಾಸ ಬಂದರೂ ಅದು ಅಧರ್ಮವಾಗಿ ಲೆಕ್ಕಿಸಲ್ಪಡುತ್ತದೆ. ಉಳಿದ ಪ್ರಪಂಚ ಕಾರ್ಯಗಳಲ್ಲಿ ಧರ್ಮ ಧರ್ಮವಾಗಿಯೇ ಆಚರಿಸಲ್ಪಡುತ್ತದೆ. ಧರ್ಮದಿಂದ ಅಧರ್ಮ ಕಾರ್ಯಗಳನ್ನು ಆಚರಿಸುವಾಗಲೇ ಧರ್ಮ ಭಂಗವಾಗಿಹೋಗಿ ಅಧರ್ಮ ಕಾರ್ಯವಾಗಿ ಬದಲಾಗಿಹೋಗುವ ಅವಕಾಶವಿದೆ. ಆದ್ದರಿಂದ ಅಧರ್ಮವನ್ನು ಆಚರಿಸುವಾಗ ಜಾಗ್ರತೆಯಾಗಿರುವುದಕ್ಕೆ ನಮ್ಮ ಹಿರಿಯರು ಮೇಲಿನ ವಾಕ್ಯವನ್ನು ಹೇಳಿದ್ದಾರೆ.



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಾಗುವುದಿಲ್ಲ,**

**ಸತ್ಯವನ್ನು ಸಾವಿರಜನ ಅಲ್ಲಗಳೆದರೂ ಅದು ಅಸತ್ಯವಾಗುವುದಿಲ್ಲ.**



# ಒಗಟುಗಳಲ್ಲಿನ ಜ್ಞಾನ

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು


ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ


ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು


ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ


ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)

Author : The Only Guru of Three Religions The Spiritual Emperor, Thraitha Theorem Originator

**Sri Acharya Prabodhananda Yogeeshwarulu**